



# ನಮ್ಮ ಕಾನೂನುಗಳು

## 9 ಅತ್ಯಾಚಾರ
## ಬಲಾತ್ಕಾರದ ಅಪಹರಣ


ಪ್ರಕಾಶಕರು

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ

ಹಾಗೂ

ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಕರ್ನಾಟಕ ಸರಕಾರ

ಇವರಿಗಾಗಿ,

ಕವಿ ಕಾವ್ಯ ಟ್ರಸ್ಟ್, ಹೆಗ್ಗೋಡು

1993, ಡಿಸೆಂಬರ್.


ಮಹಿಳೆಯ ಹಕ್ಕುಗಳು

**ಮೂಲ ಪ್ರಕಾಶಕರು**

ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ
ಇವರಿಗೆ
ಮಾರ್ಗ್ ತಂಡದವರಿಂದ

ಕನ್ನಡ ಅವತರಣಿಕೆಯ ಪ್ರಕಾಶನವನ್ನು
ಸಾಧ್ಯವಾಗಿಸಿದ **UNICEF** ಸಂಸ್ಥೆಯ ನೆರವನ್ನು
ಗೌರವದಿಂದ ನೆನೆಯು...



**ಮುಖಪುಟ**
ಪ್ರಸನ್ನ

**ಪುಸ್ತಕ ವಿನ್ಯಾಸ**
ಮುದ್ರ ಸಿಸ್ಟಮ್ಸ್, ಹೆಗ್...

**ಸಂಪಾದನೆ**
ಆಭ ಸಿಂಘಲ್ ಜೋ...

**ಸಹಾಯ**
ಜ್ಯೋತಿ ಗುಪ್ತ, ಸೀಮ ಮಿಶ್ರ, ಕಮಲೇಶ ಕುಮಾರಿ

**ಅಕ್ಷರ ಜೋಡಣೆ**
ವಾಗರ್ಥ ಪ್ರಿಂಟಾನಿಕ್ಸ್, ಬೆಂಗಳೂರು

ಮುದ್ರಕರು
**ರಾಜ ಪ್ರಿಂಟರ್ಸ್**
ಬೆಂಗಳೂರು – 560 027
ದೂರವಾಣಿ : 2234066





**ಎಂ. ವೀರಪ್ಪ ಮೊಯಿಲಿ**
ಮುಖ್ಯ ಮಂತ್ರಿ




27, ನವೆಂಬರ್, 93.
ಬೆಂಗಳೂರು - 560001.

## ಸಂದೇಶ

ಮಹಿಳೆಯರ ಹಕ್ಕುಗಳನ್ನು ಕುರಿತ ಈ ಪುಸ್ತಕಮಾಲಿಕೆಯನ್ನು ಕನ್ನಡದ ಜನತೆಗೆ ಅರ್ಪಿಸಲಿಕ್ಕೆ ನನಗೆ ತುಂಬ ಹೆಮ್ಮೆ ಎನ್ನಿಸುತ್ತಿದೆ. ದುಡಿಯುವ ಮಹಿಳೆಯರು, ಗ್ರಾಮೀಣ ಮಹಿಳೆಯರು ಹಾಗೂ ಕೆಳವರ್ಗಗಳನ್ನು ಗಂಭೀರ ಸಮಸ್ಯೆಗಳು ಕಾಡುತ್ತಿವೆ. ಅವರು ಸಾಮಾಜಿಕವಾಗಿ ತುಳಿತಕ್ಕೆ ಒಳಗಾಗಿದ್ದಾರೆ. ಕಾರ್ಮಿಕಳಾಗಿ, ಜೀತದಾಳಾಗಿ, ಮದುವೆಯಲ್ಲಿ, ವಿಚ್ಛೇದನದಲ್ಲಿ, ಆಸ್ತಿ ಹಕ್ಕಿನಲ್ಲಿ, ಕೋರ್ಟಿನಲ್ಲಿ, ಠಾಣೆಗಳಲ್ಲಿ, ಆಕೆ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾಳೆ. ಅನೇಕರು ಅತ್ಯಾಚಾರಕ್ಕೆ ಒಳಗಾಗುತ್ತಾರೆ. ರಾಜ್ಯಾಂಗದತ್ತವಾಗಿ ಹಾಗೂ ಕಾನೂನಿನ ಅಡಿಯಲ್ಲಿ ಅವರಿಗೆ ದಕ್ಕಿರುವ ಹಕ್ಕುಗಳ ಬಗ್ಗೆ ಅವರಿಗೆ ಅರಿವಿಲ್ಲ. ಅಂತಹ ಅರಿವು ಮೂಡದ ಹೊರತು ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ನಿಲ್ಲಿಸುವುದೂ ಸಾಧ್ಯವಿಲ್ಲ. ಹಾಗೆಂದು ಭಾರಿ ಗಾತ್ರದ 'ಲಾ' ಪುಸ್ತಕಗಳನ್ನು ಓದಿ ಅರಗಿಸಿಕೊಳ್ಳಿ ಎಂದು ಅನಕ್ಷರಸ್ಥರಿಂದ ಹಾಗೂ ನವ ಸಾಕ್ಷರ ಮಹಿಳೆಯರಿಂದ ಅಪೇಕ್ಷಿಸುವುದೂ ಸಾಧುವಲ್ಲ. ಇಂತಹದ್ದೊಂದು ಸಂದಿಗ್ಧವನ್ನು ನಿವಾರಿಸುತ್ತದೆ, ಈ ಮಾಲಿಕೆಯ ಹತ್ತು ಪುಸ್ತಕಗಳು.

ನಮ್ಮ ಸರ್ಕಾರದ ಕನ್ನಡ ಜಾಗೃತಿ ವರ್ಷದ ಆಚರಣೆಯಲ್ಲಿ ಈ ಪುಸ್ತಕಗಳ ಪ್ರಕಟಣೆ ತುಂಬ ಮಹತ್ವಪೂರ್ಣ ಕೊಡುಗೆ ಎಂದು ನನ್ನ ಭಾವನೆ. ಕನ್ನಡದ ಬೆಳವಣಿಗೆ ತುಂಬ ಅಗತ್ಯವಿರುವುದು ಕೆಳವರ್ಗಗಳಿಗೆ ಹಾಗೂ ಮಹಿಳೆಯರಿಗೆ. ಅವರನ್ನು ಗಮನದಲ್ಲಿಟ್ಟುಕೊಂಡು, ಸರಳವಾದ ಭಾಷೆ ಬಳಸಿ, ಚಿತ್ರಗಳ ಸಹಿತ, ಅವರ ಬದುಕಿಗೆ ಅನ್ವಯಿಸುವ ಉದಾಹರಣೆಗಳೊಂದಿಗೆ, ರಚಿತವಾಗಿರುವ ಈ ಪುಸ್ತಕಗಳು ಕರ್ನಾಟಕದ ಮೂಲೆ ಮೂಲೆ ತಲುಪಬೇಕು ಎಂದು ನಾನು ಆಶಿಸುತ್ತೇನೆ.

(ಎಂ. ವೀರಪ್ಪ ಮೊಯಿಲಿ)

# ಅತ್ಯಾಚಾರ



ಮೂಲ ಪಾಠ

ಮಾಯಾ ದಾರುವಾಲ

ಚಿತ್ರಗಳು

ಸುರೇಶ್‌ಕುಮಾರ್

# ಅತ್ಯಾಚಾರ

ಸಾಮಾಜಿಕ ಕೀಳರಿಮೆಯ ಕಾರಣದಿಂದಾಗಿ ಮಹಿಳೆ ಎಲ್ಲ ರೀತಿಯ ಶೋಷಣೆ ಮತ್ತು ಅಪಚಾರಗಳಿಗೆ ಒಳಗಾಗಿದ್ದಾಳೆ. ಅತ್ಯಾಚಾರ ಅಂಥ ಒಂದು ಘೋರ ಅಪರಾಧ.

**ಅತ್ಯಾಚಾರ ಎಂದರೇನು ?**

ಗಂಡಸು, ಹೆಂಗಸಿನ ಇಷ್ಟಕ್ಕೆ ವಿರುದ್ಧವಾಗಿ ಆಕೆಯನ್ನು ಸಂಭೋಗಕ್ಕೆ ಬಲಾತ್ಕರಿಸಿದಾಗ ಅದು ಅತ್ಯಾಚಾರವೆನಿಸುತ್ತದೆ. ಇದು ಅತ್ಯಾಚಾರ ಏನೆಂಬುದನ್ನ ಅರ್ಥೈಸುವ ಸಾಧಾರಣ ವಿವರಣೆಯಾಯಿತು. ಒಬ್ಬ ಹೆಂಗಸು ತನಗೆ ಏನಾಯಿತು ಎಂಬುದನ್ನು ವಿವರಿಸುತ್ತಾ "ಆತನು ನನ್ನನ್ನು ಬಲಾತ್ಕರಿಸಿದ ನಾನು ಅಸಹಾಯಕಳಾಗಿದ್ದೆ" ಎಂದಿಷ್ಟೆ ಹೇಳಬಹುದು. ಇಷ್ಟು ಅಪರಾಧಕ್ಕಾಗಿ ಒಬ್ಬ ಗಂಡಸಿಗೆ ದೀರ್ಘ ಕಾಲದ ಅಥವಾ ಅಜೀವ ಕಾರಾವಾಸ ಶಿಕ್ಷೆ ಆಗಬಹುದು. **ಮಹಿಳೆಯ ಒಪ್ಪಿಗೆಯಿಲ್ಲದೆ ಆಕೆಯನ್ನು ಸಂಭೋಗಿಸುವ ಹಕ್ಕು ಯಾವ ವ್ಯಕ್ತಿಗೂ ಇಲ್ಲ. ಅಪ್ರಾಪ್ತ ವಯಸ್ಸಿನ ಮಗುವನ್ನು ಸಂಭೋಗಿಸುವ ಹಕ್ಕು ಯಾರಿಗೂ ಇಲ್ಲ. ಹೀಗೆ ಮಾಡುವುದು ಕಾನೂನಿಗೆ ವಿರುದ್ಧವಾಗಿರುತ್ತದೆ.** ಇದು ಅತ್ಯಾಚಾರದ ಅಪರಾಧ.

ಅತ್ಯಾಚಾರವು ಸಾಮಾನ್ಯವಾಗಿ ಕಂಡುಬರುವ ಅಪರಾಧ. ಮಹಿಳೆಯರು ಇತರ ಯಾವುದೇ ವ್ಯಕ್ತಿಗೆ ಅದನ್ನು ತಿಳಿಸುವುದು ತೀರ ಅಪರೂಪ. ಮಹಿಳೆಯರು ಆ ವಿಚಾರವನ್ನು ಪೊಲೀಸ್ ಠಾಣೆಗೆ ತಿಳಿಸಲು ಇಷ್ಟಪಡುವುದಿಲ್ಲ.



**ಮಹಿಳೆಯೊಂದಿಗಿನ ಬಲಾತ್ಕಾರ ಸಂಭೋಗ ಒಂದು ಅಪರಾಧ**

- ತಾನು ಹಾಳಾಗಿ ಹೋಗಿದ್ದೇನೆ ಎಂದು ಜನಗಳು ಭಾವಿಸುತ್ತಾರೆ.
- ತನ್ನ ಕುಟುಂಬಕ್ಕೆ ಮತ್ತು ತನ್ನ ನೆಂಟರಿಷ್ಟರಿಗೆ ಕೆಟ್ಟ ಹೆಸರು ಬರುತ್ತದೆ.
- ತನ್ನ ಕಥೆಯನ್ನು ಯಾರೂ ನಂಬುವುದಿಲ್ಲ.



**ನಿಲ್ಲಿಸಿ ! ಇದರಲ್ಲಿ ಅತ್ಯಾಚಾರಕ್ಕೊಳಗಾದವಳ ತಪ್ಪು ಏನೂ ಇಲ್ಲ ತಪ್ಪು ಅತ್ಯಾಚಾರ ಮಾಡಿದವನದು**

- ತನ್ನ ಮೇಲೆ ಅತ್ಯಾಚಾರ ಮಾಡಿದವನು ಸಮಾಜದಲ್ಲಿ ಒಬ್ಬ ಗಣ್ಯ ವ್ಯಕ್ತಿಯಾಗಿದ್ದು ಆತನು ತನಗೆ ಮತ್ತು ತನ್ನ ಕುಟುಂಬದವರಿಗೆ ಕಿರುಕುಳ ಕೊಡುತ್ತಾನೆ ಎಂದೆಲ್ಲ ಅವಳು ಭಾವಿಸುತ್ತಾಳೆ.
- ಗಂಡಸರಿಂದ ಪೀಡನೆಗೆ ಒಳಗಾಗುವುದು ಮತ್ತು ಅಪಮಾನಿತರಾಗುವುದು ಮಹಿಳೆಯರ ಹಣೆಬರಹವೆಂದು ಆಕೆಯು ಭಾವಿಸುತ್ತಾಳೆ.
- ಆಕೆಯು ಮಗುವಾಗಿದ್ದರೆ ತನ್ನ ಮೇಲೆ ಏನು ನಡೆಯಿತೆಂದು ಆಕೆಗೆ ಅರ್ಥವಾಗುವುದಿಲ್ಲ.

- ಜನರು ಆಕೆಗಾದ ದುಃಸ್ಥಿತಿಗೆ ಆಕೆಯನ್ನೇ ಹೊಣೆಗಾರಳನ್ನಾಗಿ ಮಾಡುತ್ತಾರೆ. ತಪ್ಪಿತಸ್ಥನಿಗೆ ಶಿಕ್ಷೆಯನ್ನು ಕೊಡುವ ಬದಲು, ''ನೀನು ಒಬ್ಬಳೇ ಏಕೆ ಸುತ್ತುತ್ತೀಯೇ? ತಲೆಯನ್ನು ಮೇಲೆತ್ತಿಕೊಂಡು ಏಕೆ ಓಡಾಡುತ್ತೀಯ? ಸುಮ್ಮನೆ ಮನೆಯಲ್ಲಿ ಏಕೆ ಕುಳಿತಿರಬಾರದು? ಎಲ್ಲರ ಮುಂದೆಯೂ ಏಕೆ ಅಷ್ಟು ಜೋರಾಗಿ ನಗುತ್ತೀಯಾ? ಇಷ್ಟಕ್ಕೆಲ್ಲಾ ನೀನೇ ಕಾರಣ'' ಎಂದೆಲ್ಲಾ ಹೇಳುತ್ತಾರೆ.

ತನ್ನ ಮೇಲೆ ಅತ್ಯಾಚಾರ ಮಾಡಿದ ವ್ಯಕ್ತಿಯ ವಿರುದ್ದ ದೂರನ್ನು ಸಲ್ಲಿಸಲು ಮಹಿಳೆಯು ಹೆದರಿಕೊಳ್ಳಬೇಕೆ? ಅತ್ಯಾಚಾರಕ್ಕೆ ಒಳಗಾದವಳು ಕೆಟ್ಟವಳೇ ಅಥವಾ ಹಾಳಾದವಳೇ? ಒಬ್ಬ ವ್ಯಕ್ತಿಯು ತಾನು ಒಬ್ಬ ಮಹಿಳೆಯ ಮೇಲೆ ಅತ್ಯಾಚಾರ ಮಾಡಬಹುದು ಮತ್ತು ತನ್ನನ್ನು ಯಾರೂ ದಂಡಿಸಲಾರರು ಎಂದು ಭಾವಿಸಬಹುದೆ?

**ಖಂಡಿತ ಇಲ್ಲ. ಅತ್ಯಾಚಾರಕ್ಕೊಳಗಾದ ಮಹಿಳೆಗೆ ಸಹಾಯ ಮಾಡಲು ಕಾನೂನಿದೆ.**

**ಅತ್ಯಾಚಾರಕ್ಕೊಳಗಾದ ಮಹಿಳೆಗೆ ಕಾನೂನು ಹೇಗೆ ಸಹಾಯ ಮಾಡುತ್ತದೆ.?**

- ಅತ್ಯಾಚಾರ ಮಾಡಿದವನಿಗೆ ಉಗ್ರ ಶಿಕ್ಷೆ ದೊರೆಯುವುದು.
- ಅತ್ಯಾಚಾರಕ್ಕೊಳಗಾದ ಮಹಿಳೆಯು ಆ ಬಗ್ಗೆ ಪೊಲೀಸರಿಗೆ ದೂರು ನೀಡಿದರೆ ಅವರು ಆಕೆಯ ಹೆಸರು ಮತ್ತು ವಿವರಗಳನ್ನು ಬೇರಾರಿಗೂ ತಿಳಿಸುವುದಿಲ್ಲ.
- ಪೊಲೀಸರು ತಪ್ಪಿತಸ್ಥನ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ಪ್ರಾರಂಭಿಸುತ್ತಾರೆ.
- ಅತ್ಯಾಚಾರಕ್ಕೆ ಸಂಬಂಧಪಟ್ಟ ಪ್ರಕರಣದ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಗೋಪ್ಯವಾಗಿ ನಡೆಸಲಾಗುತ್ತದೆ. ಎಂದರೆ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರು ನ್ಯಾಯಾಲಯಕ್ಕೆ ಹಾಜರಾಗಲು ಅಥವಾ ವಿಚಾರಣೆಯನ್ನು ಕೇಳಲು ಅನುಮತಿಸಲಾಗುವುದಿಲ್ಲ.
- ಆಸ್ಪತ್ರೆ ಅಥವಾ ಮಹಿಳಾಶ್ರಮದಂಥ ಸ್ಥಳಗಳಲ್ಲಿ ಅಭಿರಕ್ಷೆಯಲ್ಲಿರುವಾಗ ಮಹಿಳೆಯ ಮೇಲೆ ಅತ್ಯಾಚಾರ ನಡೆದಲ್ಲಿ, ತಾನು ಆಕೆಯ ಮೇಲೆ ಅತ್ಯಾಚಾರವೆಸಗಿಲ್ಲ ಎಂದು ರುಜುವಾತು ಮಾಡುವ ಜವಾಬ್ದಾರಿ ಗಂಡಸಿನದಾಗುತ್ತದೆ. ಮಹಿಳೆಯು ರುಜುವಾತುಪಡಿಸಬೇಕಾಗಿಲ್ಲ.

**ನಮ್ಮ ದೇಶದಲ್ಲಿ ಯಾವ ಕಾನೂನುಗಳು ಅತ್ಯಾಚಾರದ ಬಗ್ಗೆ ತಿಳಿಸುತ್ತವೆ?**

- ಅಪರಾಧಗಳನ್ನು ವಿವರಿಸುವ ಮುಖ್ಯ ಕಾನೂನೆಂದರೆ **ಭಾರತೀಯ ದಂಡ ಸಂಹಿತೆ (ಭಾ.ದಂ.ಸಂ)** ಇದು ಯಾವ ಯಾವ ಕೃತ್ಯಗಳು ಅಪರಾಧಗಳೆನಿಸುತ್ತವೆ ಮತ್ತು ಅವುಗಳಿಗೆ ದಂಡನೆಗಳೇನು ಎಂಬುದನ್ನು ತಿಳಿಸುತ್ತದೆ.
- **ದಂಡ ಪ್ರಕ್ರಿಯಾ ಸಂಹಿತೆಯು (ದಂ.ಪ್ರ.ಸಂ)** ಅಪರಾಧವು ಒಮ್ಮೆ ನಡೆದ ಮೇಲೆ ಪೊಲೀಸರು ಮತ್ತು ನ್ಯಾಯಾಲಯವು ಅಪರಾಧದ ಬಗ್ಗೆ ಹೇಗೆ ವ್ಯವಹರಿಸಬೇಕು ಎಂಬುದನ್ನು ತಿಳಿಸುತ್ತದೆ.



ಸರ್ವೋಚ್ಚ ನ್ಯಾಯಾಲಯವು ಒಂದು ಹೆಣ್ಣು ಮಗುವಿನ ಮೇಲೆ ನಡೆದ ಅತ್ಯಾಚಾರ ಪ್ರಕರಣದಲ್ಲಿ ಈ ಮುಂದಿನಂತೆ ತೀರ್ಪಿತ್ತಿದೆ :-

''...ಹೆಣ್ಣು ಮಗುವಿನ ಮೇಲೆ ನಡೆಯುವ ಲೈಂಗಿಕ ಹಲ್ಲೆಗಳು, ಮಕ್ಕಳ ಮೇಲೆ ನಡೆಯುವ ಲೈಂಗಿಕ ಅಪರಾಧಗಳು, ಅವು ವರದಿಯಾಗದಿದ್ದರೂ, ಬೆಳಕಿಗೆ ಬರದಿದ್ದರೂ, ತಲ್ಲಣಗೊಳಿಸುವಷ್ಟು ಪ್ರಮಾಣದಲ್ಲಿ ಹೆಚ್ಚುತ್ತಿವೆ. ಇದಕ್ಕೆ ಕಾರಣ ಮಕ್ಕಳಿಗೆ ಅತ್ಯಾಚಾರ ಕೃತ್ಯದ ಬಗ್ಗೆ ತಿಳಿವಳಿಕೆಯಿಲ್ಲದಿರುವುದು ಮತ್ತು ಪ್ರತಿಭಟಿಸಲು ಸಾಧ್ಯವಿಲ್ಲದಿರುವುದು. ಹೆಣ್ಣು ಮಕ್ಕಳು ಹಾಗೂ ಯುವತಿಯರನ್ನು ಆಕರ್ಷಿಸುವ ಅಮಾನುಷವಾದ ವಂಚನೆಯ ಮತ್ತು ದ್ರೋಹದ ಕಲೆಯನ್ನು ಪ್ರದರ್ಶಿಸುವ ವಿಷಯಾಸಕ್ತರಿಗೆ ಹೆಣ್ಣು ಮಕ್ಕಳು ಸುಲಭವಾಗಿ ಬಲಿಯಾಗುತ್ತಾರೆ. ಆದುದರಿಂದ, ನಾಗರಿಕ ಸಮಾಜಕ್ಕೆ ವಿಪತ್ತಾಗಿರುವ ಅಂಥ ತಪ್ಪಿತಸ್ಥರನ್ನು ಕಠೋರವಾಗಿ ನಿರ್ದಯೆಯಿಂದ ಮತ್ತು ನಿಷ್ಕರುಣೆಯಿಂದ ದಂಡಿಸಬೇಕು''

ಮುಗ್ಧ ಬಾಲಕಿಯರು ತಮ್ಮ ಮೇಲಾಗುವ ದಾಳಿ ಸ್ವರೂಪವನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಹಾಗೆಂದು ಅವರನ್ನು ಹೊಣೆಗಾರರನ್ನಾಗಿ ಮಾಡಬಹುದೇ ?



- ಭಾರತ ಸಾಕ್ಷ್ಯ ಅಧಿನಿಯಮವು ಅಪರಾಧವನ್ನು ರುಜುವಾತುಪಡಿಸುವುದಕ್ಕೆ ನ್ಯಾಯಾಲಯದಲ್ಲಿ ಏನೆಲ್ಲಾ ಹೇಳಬೇಕು ಮತ್ತು ತೋರಿಸಬೇಕು ಎಂಬುದರ ಬಗ್ಗೆ ಪೂರ್ಣ ಮಾಹಿತಿಯನ್ನು ನೀಡುತ್ತದೆ.

ಒಬ್ಬ ಪುರುಷನು ಒಬ್ಬ ಮಹಿಳೆಯೊಂದಿಗೆ,

- ಆಕೆಯ ಇಚ್ಚೆಗೆ ವಿರುದ್ಧವಾಗಿ, ಅಥವಾ
- ಆಕೆಯ ಒಪ್ಪಿಗೆ ಇಲ್ಲದೆ, ಅಥವಾ
- ಆಕೆಯ ಅಥವಾ ಆಕೆಗೆ ಬೇಕಾದ ವ್ಯಕ್ತಿಗಳಿಗೆ ಜೀವಭಯ ಉಂಟುಮಾಡಿ, ಅಥವಾ
- ಆಕೆಯ ಗಂಡನೆಂದು ಹೇಳಿಕೊಂಡು ಆಕೆಯ ಒಪ್ಪಿಗೆಯನ್ನು ಪಡೆದು, ಅಥವಾ
- ತಾನು ಯಾವುದಕ್ಕೆ ಒಪ್ಪಿರುವೆ ಅದರ ಪರಿಣಾಮ ಏನು ಎಂದು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲದಿರುವಾಗ, ಅಂದರೆ ಬುದ್ದಿಮಾಂದ್ಯದಿಂದಾಗಿ ಅಥವಾ ಮದ್ಯ ಸೇವಿಸಿದ್ದಾಗ ಅಥವಾ ಅತ್ಯಾಚಾರಿಗಳು ಕೊಟ್ಟಿರುವ ಮಾದಕ ವಸ್ತುವನ್ನು ಸೇವಿಸಿರುವಾಗ, ಸಂಭೋಗ ಮಾಡಿದರೆ ಅದು ಕಾನೂನಿನ ಕಣ್ಣಲ್ಲಿ ಅತ್ಯಾಚಾರವೆನಿಸುತ್ತದೆ.



- 16 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಮಹಿಳೆಯೊಂದಿಗಿನ ಲೈಂಗಿಕ ಸಂಭೋಗವು ಅತ್ಯಾಚಾರವಾಗುತ್ತದೆ. ಆಕೆಯು ಒಪ್ಪಲಿ, ಬಿಡಲಿ ಅದು ಅಪರಾಧವೆಂದೇ ಪರಿಗಣಿತವಾಗುತ್ತದೆ.

### ಆಕೆಯ ಇಚ್ಚೆಗೆ ವಿರುದ್ಧವಾಗಿ

ಒಬ್ಬ ಮಹಿಳೆಗೆ ಲೈಂಗಿಕ ಕ್ರಿಯೆಯು ಇಷ್ಟವಿಲ್ಲದಿದ್ದು ಗಂಡಸು ಬಲವಂತ ಮಾಡಿದಾಗ ಅದು ಅತ್ಯಾಚಾರದ ಅಪರಾಧವಾಗುತ್ತದೆ. ಒಬ್ಬ ಮಹಿಳೆಯು ಕೆಲಸದಲ್ಲಿ ತೊಡಗಿರುವಾಗ ಒಬ್ಬ ಗಂಡಸು ಆಕೆಯನ್ನು ಏಕಾಂತ ಸ್ಥಳಕ್ಕೆ ಎಳೆದೊಯ್ಯುತ್ತಾನೆ ಮತ್ತು ಆಕೆಯನ್ನು ಸಂಭೋಗಿಸಲು ಪ್ರಯತ್ನಿಸುತ್ತಾನೆ. ಆಕೆಯು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾಳೆ ಮತ್ತು ''ಬೇಡ'' ವೆಂದು ಅಂಗಲಾಚುತ್ತಾಳೆ ಮತ್ತು ಅವನಿಂದ ತಪ್ಪಿಸಿಕೊಂಡು ದೂರ ಓಡಲು ಪ್ರಯತ್ನಿಸುತ್ತಾಳೆ. ಆದರೆ ಆತ ತನ್ನ ಕೈಗಳಿಂದ ಅವಳ ಬಾಯಿಯನ್ನು ಮುಚ್ಚುತ್ತಾನೆ. ಅವಳು ಹೆಣಗಾಡುತ್ತಾಳೆ ಮತ್ತು ಹೋರಾಡುತ್ತಾಳೆ ಮತ್ತು ಬಿಡಿಸಿಕೊಂಡು ಹೋಗಲು ಪ್ರಯತ್ನಿಸುತ್ತಾಳೆ. ಆದರೆ ಅವನು ತುಂಬ ಬಲಿಷ್ಟನಾಗಿದ್ದಾನೆ. ಅಂತಿಮವಾಗಿ ತನ್ನ ಕಾಮತೃಷೆಯನ್ನು ತೀರಿಸಿಕೊಳ್ಳುತ್ತಾನೆ. ಹಾಗೆಂದರೆ ಆತನು ಆಕೆಯ ಇಷ್ಟಕ್ಕೆ ವಿರುದ್ಧವಾಗಿ ಆಕೆಯನ್ನು ಸಂಭೋಗಿಸುತ್ತಿದ್ದಾನೆ ಎಂದು ಅರ್ಥ. ಆಕೆ ಸಮ್ಮತಿಸಿಲ್ಲ. ಆಕೆಗೆ ಅದು ಬೇಕಾಗಿಲ್ಲ. ಆದಾಗ್ಯೂ ಆತ ಈ ಕೃತ್ಯವನ್ನು ಮಾಡುತ್ತಾನೆ. ಇದು ಅತ್ಯಾಚಾರ.



ಜೀವಭಯವುಂಟು ಮಾಡಿ ಲೈಂಗಿಕ ಕ್ರಿಯೆಗೆ ಒಪ್ಪಿಸುವುದು ಅತ್ಯಾಚಾರವಾಗುತ್ತದೆ

## ಆಕೆಯ ಒಪ್ಪಿಗೆಯಿಲ್ಲದೆ ಅಂದರೆ ?

ಒಬ್ಬ ಮಹಿಳೆಯು ಆತನ ಜೊತೆ ಲೈಂಗಿಕ ಚಟುವಟಿಕೆಯಲ್ಲಿ ತೊಡಗಲು ಇಷ್ಟಪಡದೆ ಹೋದಾಗಲೂ ಲೈಂಗಿಕ ಕ್ರಿಯೆನಡೆದರೆ ಅದು ಅತ್ಯಾಚಾರವಾಗುತ್ತದೆ. ಆಕೆ ತನ್ನ ಅಸಮ್ಮತಿಯನ್ನು ಸೂಚಿಸಲು ಸದಾ ಹೆಣಗಾಡಬೇಕು, ಚೀರಬೇಕು, ಕೂಗಿಕೊಳ್ಳಬೇಕು ಅಥವಾ ಓಡಿಹೋಗಲು ಪ್ರಯತ್ನಿಸಬೇಕೆಂದೇನೂ ಇಲ್ಲ. ಒಬ್ಬ ಮಹಿಳೆಯು, ಗಂಡಸಿಗೆ ತನ್ನೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗಲು ಅವಕಾಶ ಮಾಡಿಕೊಡುತ್ತಾಳೆ ಎನ್ನಿ. ಆಕೆಗೆ ಎಂದೂ ಇಷ್ಟವಿರಲಿಲ್ಲ ಮತ್ತು ಆತನಿಗೆ ಇದು ಗೊತ್ತಿತ್ತು ಎಂದಿಟ್ಟುಕೊಳ್ಳಿ. ಅದು ಸಹಾ ಅತ್ಯಾಚಾರವಾಗುತ್ತದೆ.

ಒಂದು ದಿನ ರಾಧೆಯು ಸೌದೆಯನ್ನು ತರಲು ಕಾಡಿಗೆ ಹೋದಳು. ಕಂಟ್ರಾಕ್ಟರನು ಅವಳನ್ನು ಮನೆಗೆ ಕರೆದ. ರಾಧಾ ನಿರಾಕರಿಸಿದಳು. ಕಾಡಿನಲ್ಲಿ ಸೌದೆಯನ್ನು ಆರಿಸಲು ಬಿಡುವುದಿಲ್ಲವೆಂದು ಕಂಟ್ರಾಕ್ಟರನು ಬೆದರಿಸಿದ. ಅಲ್ಲದೆ ಆಕೆಯ ತಮ್ಮನನ್ನ ಕೆಲಸದಿಂದ ತೆಗೆಯುವುದಾಗಿ ಹೇಳಿದ. ಅವನು ಹಾಗೆ ಮಾಡಿದರೆ ತನ್ನ ಕುಟುಂಬವು ಹಸಿವಿನಿಂದ ಸಾಯಬೇಕಾಗುತ್ತದೆ ಎಂದು ರಾಧೆ ಯೋಚಿಸಿದಳು. ಐದು ಮಂದಿ ಇದ್ದ ಆಕೆಯ ಕುಟುಂಬದಲ್ಲಿ ತಮ್ಮನೊಬ್ಬನೇ ಸಂಪಾದನೆ ಮಾಡುತ್ತಿದ್ದಂಥ ವ್ಯಕ್ತಿ. ಆಕೆಯ ತಮ್ಮನಿಗೆ ಕಂಟ್ರಾಕ್ಟರನ ಹೊರತಾಗಿ ಇತರ ಯಾರ ಬಳಿಯೂ ಕೆಲಸ ಸಿಕ್ಕಲಾರದು. ಈ ಎಲ್ಲ ಯೋಚನೆಯಿಂದ ಅವಳಿಗೆ ಎಷ್ಟು ಭಯ ಆಯಿತೆಂದರೆ ರಾಧೆ ಕಂಟ್ರಾಕ್ಟರನ ಬಳಿ ಹೋಗಲು ಸಮ್ಮತಿಸಿದಳು. ಕಂಟ್ರಾಕ್ಟರನು ತನ್ನ ಮನೆಯಲ್ಲಿ ಆಕೆಯನ್ನು ಸಂಭೋಗಿಸಿದ. ರಾಧೆಯು ಕಂಟ್ರಾಕ್ಟರನ ಬಳಿ ಹೋಗಲು ಸಮ್ಮತಿಸಿದ್ದರೂ ಸಹ ಅದು ಒಂದು ಅತ್ಯಾಚಾರ ಪ್ರಕರಣವೇ ಆಗಿದೆ. ಏಕೆಂದರೆ ಆಕೆಗೆ ಹೆದರಿಕೆ ಉಂಟುಮಾಡಿ ಅವಳ ಒಪ್ಪಿಗೆ ಪಡೆಯಲಾಗಿತ್ತು. ಕಂಟ್ರಾಕ್ಟರನು ಅತ್ಯಾಚಾರದ ಅಪರಾಧಿ ಎಂದು ಕಾನೂನು ಹೇಳುತ್ತದೆ.

## ಒತ್ತಡಕ್ಕೆ ಮಣಿದು ಒಪ್ಪಿಗೆ ನೀಡಿದರೂ ಸಹ ಅತ್ಯಾಚಾರವಾಗುತ್ತದೆ.

ಪುರುಷನು ತನ್ನನ್ನು ಹೆದರಿಸಿದ ಕಾರಣದಿಂದ ಅಥವಾ ತನಗೆ ಪರೋಕ್ಷವಾಗಿ ಬೆದರಿಕೆ ಹಾಕಿದ ಕಾರಣದಿಂದ ಆತನ ಜೊತೆ ಲೈಂಗಿಕ ಕ್ರಿಯೆಯಲ್ಲಿ ತೊಡಗಲು ಮಹಿಳೆ ಸಮ್ಮತಿಸಿದ್ದಾಗ್ಯೂ ಆಕೆ ಒಪ್ಪಿದ್ದಳು ಎಂದು ಹೇಳಲಾಗುವುದಿಲ್ಲ. ಒಬ್ಬ ಪುರುಷನು, ತನ್ನೊಂದಿಗೆ ಲೈಂಗಿಕ ಕ್ರಿಯೆಗೆ ಎಳಸದಿದ್ದರೆ ಮಹಿಳೆಯನ್ನ ಹೊಡೆಯುವುದಾಗಿ, ಮಗುವನ್ನು ಹಿಂಸಿಸುವುದಾಗಿ ಅಥವಾ ಗಂಡನನ್ನು ಕೊಲ್ಲುವುದಾಗಿ ಹೇಳಿ ಆಕೆಯ ಸಮ್ಮತಿ ಪಡೆದು ಲೈಂಗಿಕ ಕ್ರಿಯೆ ನಡೆಸಿದ್ದರೆ ಆಗಲೂ ಸಹ ಅದು ಅತ್ಯಾಚಾರವೆನಿಸುತ್ತದೆ.

ಹೆಂಗಸು ಸ್ವಇಚ್ಚೆಯಿಂದ ಒಬ್ಬ ಪುರುಷನೊಂದಿಗೆ ಲೈಂಗಿಕ ಸಂಪರ್ಕ ಹೊಂದಿದ್ದರೆ ಅದು ಅತ್ಯಾಚಾರವೆನಿಸುವುದಿಲ್ಲ. ಒಬ್ಬ ವೈಶ್ಯೆಯ ಜೊತೆಯೇ ಆಗಲಿ ಆಕೆಯ ಒಪ್ಪಿಗೆ ಇಲ್ಲದೆ ಲೈಂಗಿಕ ವ್ಯವಹಾರ ನಡೆಸುವುದೂ ಅತ್ಯಾಚಾರವಾಗುತ್ತದೆ. ಆಕೆ ಕೆಟ್ಟ ನಡತೆಯ ಹೆಣ್ಣು, ಆದುದರಿಂದ ತನ್ನ ಜೊತೆ ಲೈಂಗಿಕ ಕ್ರಿಯೆ ನಡೆಸಲು ಆಕೆಯನ್ನು ಒತ್ತಾಯಿಸಬಹುದು ಎಂದು ಪುರುಷನು ಹೇಳಲಿಕ್ಕಾಗುವುದಿಲ್ಲ.

**ಗಂಡ ತನ್ನ ಹೆಂಡತಿಯ ಮೇಲೆ ಅತ್ಯಾಚಾರ ಮಾಡಬಹುದೆ ?**

ಸಾಮಾನ್ಯವಾಗಿ ಅಲ್ಲ. ಭಾರತದಲ್ಲಿ ಒಬ್ಬ ಪುರುಷನು ತನ್ನ ಹೆಂಡತಿಯನ್ನು ತನ್ನ ಹಕ್ಕಿಂಬಂತೆ ಅನುಭವಿಸಬಹುದು ಎಂಬುದಾಗಿ ಜನ ಭಾವಿಸುತ್ತಾರೆ. 15 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಹೆಂಡತಿಯ ಜೊತೆ ಲೈಂಗಿಕ ಕ್ರಿಯೆಯಲ್ಲಿ ತೊಡಗಿದರೆ ಅದನ್ನು ಅತ್ಯಾಚಾರವೆಂದು ಕರೆಯಲಾಗುತ್ತದೆ.

ರಾಮಪ್ಪನವರು ರಮೇಶ್ ಎಂಬ ತನ್ನ ಮಗನಿಗೆ 13 ವರ್ಷ ವಯಸ್ಸಿನ ಸರಸ್ವತಿ ಎಂಬ ಹುಡುಗಿಯ ಜೊತೆ ಮದುವೆ ಮಾಡಿದರು ರಮೇಶನು ತನ್ನ ಹೆಂಡತಿ ಸರಸ್ವತಿಯೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗಿದ. ಸರಸ್ವತಿಗೆ ಇನ್ನೂ 15 ವರ್ಷಗಳು ತುಂಬಿಲ್ಲದ ಕಾರಣದಿಂದಾಗ ಇದು ಅತ್ಯಾಚಾರವಾರವಾಗುತ್ತದೆ.

**15 ವರ್ಷಗಳಿಗಿಂತ ಕಡಿಮೆ ವಯಸ್ಸಿನ**



**ಹೆಂಡತಿಯನ್ನು ಸಂಭೋಗಿಸಿದರೆ ಅದು ಅತ್ಯಾಚಾರವಾಗುತ್ತದೆ**

18 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಹುಡುಗಿಯನ್ನು ಮದುವೆಯಾಗುವುದು ಕಾನೂನಿಗೆ ವಿರುದ್ಧ. ಆದರೆ ನಮ್ಮ ದೇಶದಲ್ಲಿ ಬಹಳ ಮಂದಿ ತಮ್ಮ ಮಕ್ಕಳಿಗೆ ಆ ವಯಸ್ಸಿಗಿಂತ ಮೊದಲೇ ಮದುವೆ ಮಾಡುತ್ತಾರೆ. ಹೆಂಡತಿಯು 15 ವರ್ಷಗಳಿಗಿಂತ ಕಡಿಮೆ ವಯಸ್ಸಿನವಳಾಗಿದ್ದು ಆಕೆಯೊಂದಿಗೆ ಗಂಡಸು ಸಂಭೋಗ ನಡೆಸಿದರೆ, ಅದು ಅತ್ಯಾಚಾರದ ಅಪರಾಧವಾಗುತ್ತದೆ ಮತ್ತು ಕಾನೂನಿನ ಮೂಲಕ ದಂಡನೆಗೆ ಗುರಿಯಾಗುತ್ತದೆ.

ಹೆಂಡತಿಗೆ 12 ವರ್ಷಗಳಿಗಿಂತ ಹೆಚ್ಚು ವಯಸ್ಸಾಗಿದ್ದು, 15 ವರ್ಷಗಳಿಗಿಂತ ಕಡಿಮೆ ವಯಸ್ಸಾಗಿದ್ದರೆ ಇಂಥ ಸಂದರ್ಭದಲ್ಲಿ ಆದ ಅತ್ಯಾಚಾರಕ್ಕೆ ವಿಧಿಸುವ ಶಿಕ್ಷೆಯು ಎರಡು ವರ್ಷಗಳ ವರೆಗಿನ ಕಾರಾವಾಸ ಅಥವಾ ದಂಡ ಅಥವಾ ಅವೆರಡೂ ಆಗಿರುತ್ತವೆ. ಹೆಂಡತಿಯು 12 ವರ್ಷಗಳಿಗಿಂತ ಕಡಿಮೆ ವಯಸ್ಸಿನವಳಾಗಿದ್ದರೆ ಶಿಕ್ಷೆಯು ಅದಕ್ಕಿಂತಲೂ ಹೆಚ್ಚಾಗಿರುತ್ತದೆ. ಏಕೆಂದರೆ ಎಳೆಯ ವಯಸ್ಸಿನ ಹುಡುಗಿಯರ ದೈಹಿಕ ಹಾಗೂ ಮಾನಸಿಕ ಬೆಳವಣಿಗೆ ಲೈಂಗಿಕ ಕ್ರಿಯೆಗೆ ಅರ್ಹವಾಗಿರುವುದಿಲ್ಲ. ಈ ಕೃತ್ಯದಿಂದಾಗಿ ಅವರು ತೀವ್ರವಾಗಿ ಗಾಯಗೊಳ್ಳಬಹುದು. ಎಳೆಯ ಹುಡುಗಿಯರು ಕೆಲವೊಮ್ಮೆ ಸಾವಿಗೀಡಾದ ಉದಾಹರಣೆಗಳೂ ಇದೆ. ಎಳೆಯ ಹುಡುಗಿಯರನ್ನು ಲೈಂಗಿಕ ಸಂಭೋಗಕ್ಕೆ ಎಳೆದರೆ ಅವರು ಮಾನಸಿಕವಾಗಿ ಘಾಸಿಗೊಳ್ಳುತ್ತಾರೆ. ನಿಮ್ಮ ಹೆಣ್ಣು ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡಬೇಡಿ. ಇದನ್ನು ಕಾನೂನು ಸಹ ನಿಷೇಧಿಸುತ್ತದೆ.

ನ್ಯಾಯಾಲಯದ ಆದೇಶದ ಮೇರೆಗೆ ಅಥವಾ, ಒಂದು ಪದ್ಧತಿಯ ಅಂಗವಾಗಿ ಅಥವಾ ರೂಡಿಗತ ಕಾರಣಗಳಿಗಾಗಿ, ಗಂಡ ಹೆಂಡತಿ ಪ್ರತ್ಯೇಕವಾಗಿ ವಾಸ ಮಾಡುತ್ತಿದ್ದು, ಗಂಡನು ಆಕೆಯ ಸಮ್ಮತಿ ಇಲ್ಲದೆ ಆಕೆಯೊಂದಿಗೆ ಸಂಭೋಗ ಮಾಡಿದರೆ ಅದು ಸಹ ಅತ್ಯಾಚಾರವಾಗುತ್ತದೆ.

ಒಬ್ಬ ಗಂಡಸು, ಆಕೆಯ ಗಂಡನಂತೆ ಸೋಗುಹಾಕಿ, ಹೆಂಗಸೊಬ್ಬಳನ್ನ ಸಂಭೋಗಿಸಿದರೆ, ಅದು ಸಹ ಅತ್ಯಾಚಾರವೆನಿಸುತ್ತದೆ. ಅವನನ್ನು ಶಿಕ್ಷೆಗೆ ಗುರಿಪಡಿಸಬಹುದು.

ಭಾರತದಲ್ಲಿ ಅನೇಕ ಸಂದರ್ಭಗಳಲ್ಲಿ ಗಂಡ ಹೆಂಡತಿಯರು ತಮ್ಮ ಮದುವೆಯಾದ ಮೇಲೆಯೇ ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತಾರೆ. ಕೆಲವೊಮ್ಮೆ ನಿಜವಾದ ಗಂಡನ ಸೋದರ, ತಂದೆ, ಕುಟುಂಬದ ವ್ಯಕ್ತಿ, ಆಕೆಯನ್ನು ಗಂಡನ ಮನೆಗೆ ಕರೆದುಕೊಂಡು ಹೋಗಲು ಬರಬಹುದು. ತಾನೇ ಆಕೆಯ ಗಂಡ ಎಂದು ಆಕೆಗೆ ಹೇಳಬಹುದು. ಆಕೆಯು ಅವನನ್ನು ನಂಬಿ ತನ್ನನ್ನು ಅರ್ಪಿಸಿಕೊಳ್ಳಬಹುದು. ಇದು ಅತ್ಯಾಚಾರವಾಗುತ್ತದೆ. ನಿಮ್ಮ ಹೆಣ್ಣುಮಕ್ಕಳನ್ನು ಅಪರಿಚಿತರ ಜೊತೆ ಕಳುಹಿಸಬೇಡಿ.





**ಗಂಡನೆಂದು ನಂಬಿಸಿ ಸಂಭೋಗ ನಡೆಸುವುದು ಅತ್ಯಾಚಾರವಾಗುತ್ತದೆ**

**ಒಬ್ಬ ಹೆಂಗಸು ಹುಚ್ಚಿ, ಅಥವಾ ದುರ್ಬಲ ಮನಸ್ಸಿನವಳಾಗಿದ್ದು ಗಂಡಸಿನೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗಲು ಹಿಂಜರಿಯದಿದ್ದರೆ ಅದೂ ಸಹ ಅತ್ಯಾಚಾರವಾಗುವುದೆ ?**

ಹೌದು, ಏಕೆಂದರೆ ತಾನು ಏನು ಮಾಡುತ್ತಿದ್ದೇನೆ, ಯಾವುದಕ್ಕೆ ಒಪ್ಪಿಗೆ ಕೊಟ್ಟಿದ್ದೇನೆ ಎಂಬುದನ್ನು ಆಕೆ ಅರ್ಥಮಾಡಿಕೊಳ್ಳಲಾರಳು. ಆ ವ್ಯಕ್ತಿ ತನಗೇನು ಮಾಡುತ್ತಿದ್ದಾನೆ ಎಂಬುದು ಆಕೆಗೆ ತಿಳಿಯದೇ ಇರಬಹುದು. ತಾನು

ಗರ್ಭಿಣಿಯಾಗುತ್ತೇನೆ ಎಂಬುದು ಆಕೆಗೆ ಅರ್ಥವಾಗದಿರಬಹುದು. ಅಂತಹ ಹೆಂಗಸು ಒಪ್ಪಿಗೆ ಕೊಡುವಾಗ, ಅದರ ಪರಿಣಾಮದ ಬಗ್ಗೆ ಆಕೆಗೆ ತಿಳಿವಳಿಕೆ ಇಲ್ಲದಿರುವುದರಿಂದ ಕಾನೂನು ಅಂಥ ಲೈಂಗಿಕ ಕ್ರಿಯೆಯನ್ನು ಅತ್ಯಾಚಾರವೆಂದು ಪರಿಗಣಿಸುತ್ತದೆ.

ಒಬ್ಬ ಮಹಿಳೆಯು ಸಾಕಷ್ಟು ಮದ್ಯ ಸೇವಿಸಿದ್ದಂಥ ಸ್ಥಿತಿಯಲ್ಲಿ ಒಬ್ಬ ಪುರುಷನೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗಲು ಒಪ್ಪುತ್ತಾಳೆ ಎಂದು ಕೊಳ್ಳೋಣ. ಇದು ಆತನು ಆಕೆಯ ವಿರುದ್ಧ ಮಾಡಿದ ಅಪರಾಧವೆ ?







**ಅತ್ಯಾಚಾರ ನಡೆಯುವುದಕ್ಕೆ ಯಾವುದೇ ರೀತಿಯಲ್ಲಿ ಸಹಾಯ ಮಾಡುವುದು**

**ಕಾನೂನು ಪ್ರಕಾರ ಅಪರಾಧ**

ಅದು ಅಪರಾಧವಾಗಬಹುದು. ಆಕೆಯು ಹಾಗೆ ಮಧ್ಯಪಾನ ಮಾಡಿದ್ದರೆ ಅಥವಾ ಮಾದಕ ವಸ್ತುವನ್ನು ಸೇವಿಸಿದ್ದರೆ ಆಕೆಯು ತನ್ನ ಮನಸ್ಸಿನಲ್ಲಿ ಸರಿಯಾದ ನಿರ್ಧಾರ ತೆಗೆದುಕೊಳ್ಳುವ ಅಥವಾ ಒಪ್ಪಿಗೆ ಕೊಡುವ ಅಥವಾ ತಾನು ಏನು ಮಾಡುತ್ತಿದ್ದೇನೆ ಎಂದು ತಿಳಿದುಕೊಳ್ಳುವ ಸ್ಥಿತಿಯಲ್ಲಿರುವುದಿಲ್ಲ. ಅಂಥ ಸ್ಥಿತಿಯಲ್ಲಿ ಆ ವ್ಯಕ್ತಿ ಆಕೆಯನ್ನು ಸಂಭೋಗಿಸಿದ್ದಾನೆ. ಇದು ಅತ್ಯಾಚಾರವಾಗಬಹುದು.

ಮಧ್ಯಪಾನ ಮಾಡಿ ಅಥವಾ ಮಾದಕ ವಸ್ತುವನ್ನು ಸೇವಿಸಿದಾಗ ನಿದ್ರಿಸುತ್ತಿರುವಾಗ ಅಥವಾ ಇತರ ಯಾವುದೇ ಕಾರಣದಿಂದ ಪ್ರಜ್ಞೆ ತಪ್ಪಿರುವಾಗ, ಒಬ್ಬ ಗಂಡಸು ಹೆಂಗಸನ್ನ ಸಂಭೋಗಿಸಿದರೆ ಅದು ಅತ್ಯಾಚಾರವಾಗುತ್ತದೆ.

ಅತ್ಯಾಚಾರ ನಡೆಸಬೇಕೆಂದಿರುವ ವ್ಯಕ್ತಿಗೆ ಸಹಾಯ ಮಾಡುವುದು, ಉದಾಹರಣೆಗೆ ಅತ್ಯಾಚಾರಕ್ಕೆ ಒಳಗಾಗಲಿರುವ ಹೆಂಗಸಿಗೆ ಮಂಕು ಬರುವಂತೆ ಏನನ್ನಾದರೂ ತಿನ್ನಿಸುವುದು, ಕುಡಿಸುವುದು ಮಾಡಿ

ಆನಂತರ ಹೆಂಗಸಿನ ಅತ್ಯಾಚಾರ ಘಟಿಸಿದರೆ, ಸಹಾಯ ಮಾಡಿದ ವ್ಯಕ್ತಿ ಕೂಡಾ ಅತ್ಯಾಚಾರಿ ಎಂದೇ ಕಾನೂನು ಪರಿಗಣಿಸುತ್ತದೆ.

**ಅತ್ಯಾಚಾರಕ್ಕಾಗಿ ಯಾರ ಮೇಲೆ ಆರೋಪ ಹೊರಿಸಬಹುದು ?**

ಪುರುಷನು ಮಾತ್ರ ಅತ್ಯಾಚಾರದ ಆರೋಪಿಯಾಗಬಹುದು. 10 ವರ್ಷದ ಬಾಲಕ ಕೂಡಾ, ತಾನು ಏನು ಮಾಡುತ್ತಿದ್ದೇನೆ ಎಂಬುದನ್ನು ಅರಿಯುವಷ್ಟು ತಿಳುವಳಿಕೆ ಆತನಿಗೆ ಇದ್ದರೆ, ಅತ್ಯಾಚಾರಿ ಎಂದೇ ಕಾನೂನು ಪರಿಗಣಿಸುತ್ತದೆ.

ಅತ್ಯಾಚಾರದ ಆರೋಪಿಗಳು ಒಬ್ಬರಿಗಿಂತ ಹೆಚ್ಚು ಮಂದಿ ಇರಬಹುದು, ಗಂಡಸರ ಗುಂಪು ಒಬ್ಬ ಮಹಿಳೆಯನ್ನು ಒಬ್ಬರ ನಂತರ ಮತ್ತೊಬ್ಬರು ಸಂಭೋಗಿಸುವುದಕ್ಕೆ ಬಲಾತ್ಕರಿಸಿದರೆ ಆಗ ಅವರೆಲ್ಲರೂ ಅತ್ಯಾಚಾರದ ತಪ್ಪಿತಸ್ಥರಾಗುತ್ತಾರೆ. ಒಬ್ಬ ಮಹಿಳೆಯ ಅತ್ಯಾಚಾರ ಮಾಡಲು ಸಹಕರಿಸುವ ಅಥವಾ ಆಕೆಯು ಕೂಗಿಕೊಳ್ಳದಂತೆ ಬಾಯಿ ಮುಚ್ಚುವ ಅಥವಾ ಅಲ್ಲಿಗೆ ಯಾರಾದರೂ ಬರುತ್ತಾರೆಯೋ ಎಂಬುದನ್ನು ತಿಳಿದು ಹೇಳಲು ಕಾವಲು ನಿಲ್ಲುವ ವ್ಯಕ್ತಿಯು ಸಹ ತಪ್ಪಿತಸ್ಥನಾಗುತ್ತಾನೆ. ಅತ್ಯಾಚಾರದ ಅಪರಾಧದಲ್ಲಿ ಸಹಾಯಕವಾಗುವ ಯಾವುದೇ ಕಾರ್ಯ ಮಾಡುವ ವ್ಯಕ್ತಿ ಸಹ ಅಪರಾಧ ಎಸಗಿದಂತಾಗುತ್ತದೆ ಮತ್ತು ಶಿಕ್ಷಾರ್ಹನಾಗುತ್ತಾನೆ. ಮತ್ತೊಬ್ಬ ಮಹಿಳೆಯ ಮೇಲೆ ಅತ್ಯಾಚಾರ ಮಾಡಲು ಸಹಾಯ ಮಾಡುವ ಸ್ತ್ರೀಯು ಕೂಡ ಅಪರಾಧವೆಸೆಗಿದಂತಾಗುತ್ತದೆ.

> ಕೆರೆಯೂರು ಪುರ ಗ್ರಾಮದ ಒಬ್ಬ ಪ್ರಭಾವಶಾಲಿ ಜಮೀನುದಾರ ರಾಮಲಿಂಗಯ್ಯನು ಊರ ತಳವಾರನ ಮಗಳು ನಿಂಗಿಯನ್ನು ಮನೆಗೆ ಕರೆದುಕೊಂಡು ಬರುವಂತೆ ಸೇವಕರಾದ ತಿಮ್ಮ ಹಾಗೂ ಸಿದ್ದರಿಗೆ ತಿಳಿಸಿದ. ತಿಮ್ಮ ಹಾಗೂ ಸಿದ್ದ ನಿಂಗಿಯನ್ನು ಬಲವಂತವಾಗಿ ರಾಮಲಿಂಗಯ್ಯನ ಮನೆಗೆ ಎಳೆದುಕೊಂಡು ಬಂದರು. ಅಲ್ಲಿ ಆತನು ಆಕೆಯ ಮೇಲೆ ಅತ್ಯಾಚಾರ ಮಾಡಿದ. ನಿಂಗಿ ಕೂಗಾಡಿದಾಗ ರಾಮಲಿಂಗಯ್ಯನ ಸೇವಕಿ ಶಿವಿ ಭದ್ರವಾಗಿ ಹಿಡಿದುಕೊಂಡು ಬಾಯಿಯನ್ನು ಮುಚ್ಚಿದಳು. ಈ ಅಪರಾಧದಲ್ಲಿ ರಾಮಲಿಂಗಯ್ಯನನ್ನು ಅತ್ಯಾಚಾರಕ್ಕಾಗಿ ಶಿಕ್ಷಿಸಲಾಯಿತು. ಅಲ್ಲದೆ ಈ ಅತ್ಯಾಚಾರದ ಅಪರಾಧದಲ್ಲಿ ನೆರವಾದದ್ದಕ್ಕಾಗಿ ತಿಮ್ಮ, ಸಿದ್ದ ಹಾಗೂ ಶಿವಿಯರನ್ನ ಸಹಾ ಶಿಕ್ಷೆಗೆ ಗುರಿಪಡಿಸಲಾಯಿತು.

**ಹಾಗಾದರೆ ಯಾವನೇ ಗಂಡಸು ಹೆಂಗಸಿನ ಮೇಲೆ ಅತ್ಯಾಚಾರ ಮಾಡಿದರೆ ಸೆರೆಮನೆ ವಾಸ ಅನುಭವಿಸುತ್ತಾನೆಯೇ ?**

ಹೌದು, ಒಬ್ಬ ಗಂಡಸು ಹೆಂಗಸಿನ ಮೇಲೆ ಅತ್ಯಾಚಾರ ಮಾಡಿದ್ದಾನೆಂದು ನ್ಯಾಯಾಲಯದಲ್ಲಿ ರುಜುವಾತಾದರೆ, ಆತನನ್ನು ಕಡೇಪಕ್ಷ 7 ವರ್ಷ ಸೆರೆವಾಸಕ್ಕೆ ದೂಡಲಾಗುವುದು. ಕೆಲವೊಮ್ಮೆ ನ್ಯಾಯಾಲಯವು ಆರೋಪಿಯನ್ನು ಜೀವನಪರ್ಯಂತ ಕಾರಾವಾಸದಲ್ಲಿಡಬಹುದು.

ಕೆಲವು ಪ್ರಕರಣಗಳಲ್ಲಿ ಕನಿಷ್ಠ **ದಂಡನೆಯು 10 ವರ್ಷಗಳ ಸೆರೆಮನೆ ವಾಸವಾಗಿರುತ್ತದೆ.** ಅವುಗಳೆಂದರೆ:-

- ಒಬ್ಬ ಪುರುಷ, ಹೆಂಗಸು ಗರ್ಭಿಣಿ ಎಂದು ತಿಳಿದೂ ಅತ್ಯಾಚಾರವೆಸಗುವುದು.
- 12 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಹುಡುಗಿಯ ಮೇಲೆ ಅತ್ಯಾಚಾರ ಮಾಡುವುದು.



- ಹಲವಾರು ಪುರುಷರು ಗುಂಪು ಗೂಡಿಕೊಂಡು ಅಥವಾ ಸಾಮೂಹಿಕವಾಗಿ ಹೆಂಗಸಿನ ಮೇಲೆ ಅಥವಾ ಕೆಲವು ಹೆಂಗಸರ ಮೇಲೆ ಅತ್ಯಾಚಾರ ಮಾಡುವುದು.
- ಅಭಿರಕ್ಷೆಯಲ್ಲಿ ಇರುವಾಗ ಅತ್ಯಾಚಾರ ಮಾಡುವುದು.

**ಅಭಿರಕ್ಷೆಯಲ್ಲಿರುವಾಗಿ ಅತ್ಯಾಚಾರ ಎಂದರೇನು ?**

ಕೆಲವು ವ್ಯಕ್ತಿಗಳು ಪ್ರಭಾವೀ ಸ್ಥಾನದಲ್ಲಿರುತ್ತಾರೆ. ಅವರು ತಮ್ಮ ಸ್ಥಾನವನ್ನು ದುರುಪಯೋಗ ಪಡಿಸಿಕೊಂಡು ತನ್ನ ರಕ್ಷೆಯಲ್ಲಿರುವ ಹೆಂಗಸನ್ನ ಲೈಂಗಿಕ ಕ್ರಿಯೆಗೆ ಬಲವಂತಪಡಿಸಿದರೆ ಅದು ಗುರುತರ ಅಪರಾಧವಾಗುತ್ತದೆ. ಇಂಥವರಿಗಾಗಿ ವಿಶೇಷ ನಿಯಮಗಳನ್ನು ಮಾಡಲಾಗಿದೆ. ಶಿಕ್ಷೆಯೂ ಸಹ ತುಂಬಾ ಹೆಚ್ಚಿನ ಪ್ರಮಾಣದ್ದಾಗಿರುತ್ತದೆ.

**ಈ ವ್ಯಕ್ತಿಗಳು ಯಾರು ಮತ್ತು ಅವರಿಗೆ ಯಾವ ಶಿಕ್ಷೆಯನ್ನು ವಿಧಿಸಲಾಗುತ್ತದೆ ?**

ಈ ವ್ಯಕ್ತಿಗಳು ಪೊಲೀಸಿನವರಾಗಿರಬಹುದು, ಸಾರ್ವಜನಿಕ ನೌಕರರಾಗಿರಬಹುದು ಅಥವಾ ಬಂಧಿಖಾನೆ, ರಿಮ್ಯಾಂಡ್ ಹೋಮ್, ಆಸ್ಪತ್ರೆಗಳ ಮ್ಯಾನೇಜರ್‌ಗಳಾಗಿರಬಹುದು, ಸಿಬ್ಬಂದಿಯಾಗಿರಬಹುದು. ಇವರು ತಮ್ಮ ಕೈ ಕೆಳಗಿನ ಹೆಂಗಸರ, ಅಂದರೆ ತಮ್ಮ ಅಭಿರಕ್ಷೆಯಲ್ಲಿರುವ ಹೆಂಗಸರ ಮೇಲೆ ಅತ್ಯಾಚಾರ ಮಾಡಿದರೆ ಅವರಿಗೆ ಕಡೇಪಕ್ಷ 10 ವರ್ಷಗಳ ಸೆರೆಮನೆ ವಾಸದ ಶಿಕ್ಷೆ ವಿಧಿಸಲಾಗುವುದು. ಅವರಿಗೆ ಇನ್ನೂ ಹೆಚ್ಚಿನ ಶಿಕ್ಷೆ ವಿಧಿಸಬಹುದು ಅಥವಾ ಅಜೀವ ಕಾರಾವಾಸ ಶಿಕ್ಷೆಯನ್ನು ಕೂಡಾ ವಿಧಿಸಬಹುದು.

**ಇವರಿಗೆ ಹೆಚ್ಚಿನ ಶಿಕ್ಷೆಯನ್ನು ಏಕೆ ವಿಧಿಸಬೇಕು ?**

ಈ ಪ್ರಕರಣಗಳಲ್ಲಿ ಹೆಂಗಸು ಆ ವ್ಯಕ್ತಿಗಳ ಅಭಿರಕ್ಷೆಯಲ್ಲಿರುತ್ತಾಳೆ. ಮಹಿಳೆಯು ಪ್ರತಿಭಟಿಸಲಾರದಂಥ ಸ್ಥಾನದಲ್ಲಿರುತ್ತಾಳೆ. ಅಂಥ ಮಹಿಳೆಯರನ್ನು ನೋಡಿಕೊಳ್ಳುವುದು ಮತ್ತು ಅವರನ್ನು ರಕ್ಷಿಸುವುದು ಪೊಲೀಸಿನವರೇ ಮುಂತಾದ ವ್ಯಕ್ತಿಗಳ ಕರ್ತವ್ಯವಾಗಿದೆ. ತಮ್ಮ ಅಭಿರಕ್ಷೆಯಲ್ಲಿರುವವರ ಮೇಲೆಯೇ ಅತ್ಯಾಚಾರ ಮಾಡಿದ್ದಾದರೆ ಅದು ಅಕ್ಷಮ್ಯ ಅಪರಾಧ. ಹಾಗಾಗಿ ಅವರಿಗೆ ಉಗ್ರ ಶಿಕ್ಷೆ ನೀಡಬೇಕು. ಹೆಂಗಸಿನ ಸಮ್ಮತಿ ಪಡೆದು ಹಾಗೆ ಮಾಡಿದಾಗ್ಯೂ ಸಹ ಅಂಥವರಿಗೆ ವಿಶೇಷ ಬಗೆಯ ಶಿಕ್ಷೆ ವಿಧಿಸಲು ಸರ್ಕಾರವು ನಿಯಮ ರಚಿಸಿದೆ.

**ಅದು ಏನು ?**

ಒಬ್ಬ ಸಾರ್ವಜನಿಕ ನೌಕರನ ನಿಯಂತ್ರಣದಲ್ಲಿ ಒಬ್ಬ ಹೆಂಗಸಿದ್ದಾಳೆ ಎಂದು ಭಾವಿಸೋಣ. ಆಕೆಯು ಲೈಂಗಿಕ ಕ್ರಿಯೆಗೆ ಸಮ್ಮತಿಸಿದ ಮೇಲೆ ಆಕೆಯನ್ನು ಸಂಭೋಗಿಸಿದರೂ ಸಹ ಆತನು 5 ವರ್ಷಗಳವರೆಗೆ ಕಾರಾವಾಸ ಅನುಭವಿಸಬೇಕಾಗುತ್ತದೆ.

ಅನಾಥಾಶ್ರಮ ಅಥವಾ ಉಪೇಕ್ಷಿತ ಮಹಿಳೆಯರು ಹಾಗೂ ಮಕ್ಕಳ ಗೃಹ ಅಥವಾ ವಿಧವೆಯರ ಗೃಹ ಅಥವಾ ಹೆಂಗಸು ಮಕ್ಕಳಿಗೆ ರಕ್ಷೆ ನೀಡಬೇಕಾದ ಮತ್ತಾವುದೇ ಸ್ಥಳದಲ್ಲಿ ಯಾವುದೇ ಅಧಿಕಾರಿಗೂ ಅಂಥದೇ ಶಿಕ್ಷೆ ವಿಧಿಸಲಾಗುವುದು.

ಆಸ್ಪತ್ರೆಯ ಪ್ರಭಾರದಲ್ಲಿರುವ ಅಥವಾ ಅಲ್ಲಿ ಕೆಲಸ ಮಾಡುತ್ತಿರುವವರಿಗೂ ಸಹ ಅಂಥದೇ ಶಿಕ್ಷೆ ವಿಧಿಸಲಾಗುತ್ತದೆ. ಹೆಂಗಸು ಒಪ್ಪಿಗೆ ಕೊಟ್ಟಿದ್ದರೂ ಇಂಥ ಸಂದರ್ಭಗಳಲ್ಲಿ ಆರೋಪಿಗೆ 5 ವರ್ಷಗಳವರೆಗೆ ಕಾರಾವಾಸ ಆಗಬಹುದು.

**ಅತ್ಯಾಚಾರವು ಒಂದು ರಹಸ್ಯ ಕೃತ್ಯ. ಹೆಂಗಸು ತನ್ನ ಮೇಲೆ ಅತ್ಯಾಚಾರವಾಗಿದೆ ಎಂದು ಹೇಗೆ ತೋರಿಸಬಲ್ಲಳು ?**

ಪೊಲೀಸಿನಂತಹ ಸಾರ್ವಜನಿಕ ನೌಕರ, ದರೋಗ ಅಥವಾ ಅಂಥದೇ ಒಬ್ಬ ವ್ಯಕ್ತಿ ಹೆಂಗಸಿನೊಂದಿಗೆ ಲೈಂಗಿಕ ಕ್ರಿಯೆ ನಡೆಸಿದರೆ ಆಗ ಆಕೆ ಲೈಂಗಿಕ ಕ್ರಿಯೆ ನಡೆದಿದೆ ಎಂದು ಸಾಧಿಸಿ ತೋರಿಸಬೇಕು. ತನ್ನೊಂದಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗಲು ಆತ ಬಲವಂತ ಮಾಡಿದ ಎಂಬುದನ್ನಾಗಲೀ ಅಥವಾ ಆಕೆಯು ಒಪ್ಪಲಿಲ್ಲ ಎಂಬುದನ್ನಾಗಲೀ ಸಾಧಿಸಿ ತೋರಿಸಬೇಕಾಗಿಲ್ಲ.

**ಅತ್ಯಾಚಾರ ಆದಾಗ ಆಕೆ ಏನು ಮಾಡಬೇಕು ?**

● ಗುಪ್ತಾಂಗವನ್ನು ತೊಳೆಯಬಾರದು, ಸ್ನಾನ ಮಾಡಬಾರದು ಅಥವಾ ಬಟ್ಟೆ ಬದಲಾಯಿಸಬಾರದು. ಅತ್ಯಾಚಾರಕ್ಕೆ ಒಳಗಾದ ಹೆಂಗಸು ಸಹಜವಾಗಿಯೇ ತಾನು ಗಲೀಜಾದೆ ಎಂದು ಭಾವಿಸುತ್ತಾಳೆ ಮತ್ತು ಆಕೆ ಮೊದಲು ಮೈ ತೊಳೆದುಕೊಂಡು ಬಟ್ಟೆ ಬದಲಾಯಿಸಲು ಇಚ್ಛಿಸುತ್ತಾಳೆ. ಆಕೆಯು ಹೀಗೆ ಮಾಡಬಾರದು. ಆಕೆಯ ದೈಹಿಕ ಸ್ಥಿತಿ ಅಪರಾಧದ ಒಂದು ಮುಖ್ಯ ಸಾಕ್ಷ್ಯವಾಗಿರುತ್ತದೆ.


**ಸ್ನಾನ ಮಾಡಬೇಡಿ ಅಥವಾ ಬಟ್ಟೆ ಬದಲಾಯಿಸಬೇಡಿ**

● **ಯಾರಿಗಾದರೂ ಹೇಳಿ:** ನಿಮ್ಮ ಮನೆಯಲ್ಲಿ ಯಾರಿಗಾದರೂ ಅಥವಾ ನೀವು ನಂಬುವಂಥ ಯಾವುದೇ ವ್ಯಕ್ತಿಗಾಗಲೀ ಹೇಳಿ. ಅವರ ಜೊತೆಗೂಡಿ ಪೊಲೀಸ್ ಠಾಣೆಗೆ ಹೋಗಿ. ಗ್ರಾಮದ ಹಿರಿಯ ವ್ಯಕ್ತಿಯ ಜೊತೆ ಅಥವಾ



ಆಕ್ರಮಣದ ಬಗ್ಗೆ ಯಾರಿಗಾದರೂ ತಿಳಿಸಿ



ಗ್ರಾಮದ ಹಿರಿಯರ ಸಹಾಯ ಪಡೆಯಿರಿ

ಕುಟುಂಬದ ವ್ಯಕ್ತಿಗಳ ಜೊತೆ ಪೊಲೀಸ್ ಠಾಣೆಗೆ ಹೋಗುವುದು ಒಳಿತು. ಹತ್ತಿರದಲ್ಲಿ ಯಾವುದೇ ಪೊಲೀಸ್‌ಠಾಣೆ ಇಲ್ಲದಿದ್ದರೆ ಊರಿನ ಸರಪಂಚನಿಗೆ ಅಥವಾ ಹಿರಿಯ ವ್ಯಕ್ತಿಗೆ ದೂರು ಕೊಡಿ.

- ಪೊಲೀಸರಿಗೆ ತಕ್ಷಣವೇ ತಿಳಿಸಿ.



ಪೊಲೀಸರಿಗೆ ತಕ್ಷಣವೇ ತಿಳಿಸಿ

ಯಾರಾದರೂ ಅತ್ಯಾಚಾರ ಮಾಡಲು ಪ್ರಯತ್ನಿಸಿದ್ದರೆ ಅಥವಾ ವಾಸ್ತವವಾಗಿ ಅತ್ಯಾಚಾರ ಮಾಡಿದ್ದರೆ, ಹೆಂಗಸು ಬಹಳ ದುಸ್ಥಿತಿಯಲ್ಲಿರುತ್ತಾಳೆ; ವಾಸ್ತವವಾಗಿ ನಡೆದದ್ದನ್ನು ಬಾಯಿಬಿಡಲು ಭಯಪಡುತ್ತಾಳೆ. ಆದರೆ ಪೊಲೀಸರಿಗೆ ತಕ್ಷಣ ತಿಳಿಸಬೇಕು. ಹೆಂಗಸು ಒಂದು ಅಥವಾ ಎರಡು ದಿವಸಗಳ ನಂತರ ತಿಳಿಸಿದರೆ ಆ ವೇಳೆಗೆ ಅತ್ಯಾಚಾರವಾದ ಬಗೆಗಿನ ಎಲ್ಲ ಲಕ್ಷಣಗಳೂ ತೊಡೆದುಹೋಗಿರುತ್ತವೆ, ರುಜುವಾತುಪಡಿಸುವುದು ಕಷ್ಟವಾಗುತ್ತದೆ.

● **ಆಕೆಯನ್ನು ಪರೀಕ್ಷೆಗೊಳಪಡಿಸಿ:** ಪೊಲೀಸರು ತಕ್ಷಣವೇ ಆ ಹೆಂಗಸನ್ನು ವೈದ್ಯರಿಂದ ಯುಕ್ತವಾಗಿ ಪರೀಕ್ಷಿಸಬೇಕು. ಪರೀಕ್ಷೆ ಮಾಡಿಸಿಕೊಳ್ಳುವುದು ಬಹಳ ಮುಖ್ಯ. ಹತ್ತಿರದಲ್ಲಿ ಯಾವುದೇ ಪೊಲೀಸ್ ಠಾಣೆಯು ಇಲ್ಲದಿದ್ದರೂ ಹೆಂಗಸು ತಾನೇ ಸ್ವತಃ ಸ್ವತಂತ್ರವಾಗಿ ವೈದ್ಯವೃತ್ತಿ ನಡೆಸುತ್ತಿರುವ, ಯಾವುದೇ ವೈದ್ಯರಿಂದ ಪರೀಕ್ಷಿಸಿಕೊಳ್ಳಬೇಕು. ವೆದ್ಯರಿಂದ ವೈದ್ಯಕೀಯ ಪ್ರಮಾಣಪತ್ರವನ್ನು ಪಡೆದುಕೊಳ್ಳಿ.



ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳಿ

**ವೈದ್ಯರು ಏನು ಮಾಡುತ್ತಾರೆ ?**

ವೈದ್ಯರು ಮಹಿಳೆಯನ್ನು ಪರೀಕ್ಷಿಸುತ್ತಾರೆ. ಅವಳನ್ನು ಪರೀಕ್ಷೆ ಮಾಡುವಾಗ ಆಕೆಯ ಕುಟುಂಬದ ಮತ್ತೊಬ್ಬ ಮಹಿಳೆ ಅಥವಾ ಹಿರಿಯ ಸ್ನೇಹಿತೆಯು ಬಳಿಯಲ್ಲಿ ಇರಬೇಕು. ಹೆಂಗಸಿನ ಜನನೇಂದ್ರಿಯದಲ್ಲಿ ಅಥವಾ ಅದರ ಸುತ್ತ ವೀರ್ಯವಿರುವುದೇ ಎಂಬುದನ್ನು ವೈದ್ಯರು ಪರೀಕ್ಷಿಸುತ್ತಾರೆ. ಕನ್ಯೆಯ ಯೋನಿಪೊರೆಯು ಒಡೆದಿದೆಯೇ ಎಂಬುದನ್ನು ಪರೀಕ್ಷಿಸುತ್ತಾರೆ. ಆಕೆಯ ಇಡೀ ದೇಹವನ್ನು, ವಿಶೇಷವಾಗಿ ತೊಡೆಯ ಸಂದುಗಳನ್ನು, ಎಲ್ಲಾದರೂ ಹರಿದಿದೆಯೇ, ಕತ್ತರಿಸಿ ಹೋಗಿದೆಯೋ, ತರಚಿದೆಯೇ ಅಥವಾ ಬರೆಗಳಾಗಿವೆಯೇ ಎಂಬುದನ್ನು ವೈದ್ಯರು ಪರೀಕ್ಷಿಸುತ್ತಾರೆ.

ಅಲ್ಲದೆ ವೈದ್ಯರು ಮಹಿಳೆಯ ಮಾನಸಿಕ ಸ್ಥಿತಿಯನ್ನು ಗಮನಿಸುತ್ತಾರೆ. ಮಹಿಳೆಯ ದೈಹಿಕ ಹಾಗೂ ಮಾನಸಿಕ ಸ್ಥಿತಿಯ ಬಗ್ಗೆ ವೈದ್ಯರು ಒಂದು ವರದಿಯನ್ನು ಸಲ್ಲಿಸುತ್ತಾರೆ. ಮುಂದೆ ಈ ವರದಿಯನ್ನು ನ್ಯಾಯಾಲಯದಲ್ಲಿ ಹಾಜರುಪಡಿಸಲಾಗುವುದು. ನ್ಯಾಯಾಲಯಕ್ಕೆ ಬಂದು ಈ ಪರೀಕ್ಷೆಯ ಬಗ್ಗೆ ತಿಳಿಸಲು ನ್ಯಾಯಾಲಯವು ವೈದ್ಯರನ್ನು ಕೇಳುತ್ತದೆ. ಈ ಎಲ್ಲವುಗಳನ್ನು ಸಾಕ್ಷ್ಯ ಎಂದು ಪರಿಗಣಿಸಲಾಗುತ್ತದೆ. ಹೆಂಗಸು ನಿಜ ಹೇಳುತ್ತಿದ್ದಾಳೆ ಎಂದು ರುಜುವಾತು ಪಡಿಸಲು ಅವು ಬಹಳ ಮುಖ್ಯವಾಗಿರುತ್ತದೆ.

**ಹೆಂಗಸಿನ ಮೇಲೆ ಅತ್ಯಾಚಾರ ಮಾಡಿದ ಗಂಡಸಿನ ಗತಿ ಏನು ?**

ಕೆಲವು ಬಾರಿ ಹೆಂಗಸು ತನ್ನ ಮೇಲೆ ಅತ್ಯಾಚಾರ ಮಾಡಿದ ಗಂಡಸಿನ ಬಗ್ಗೆ ತಿಳಿದಿರುತ್ತಾಳೆ. ಅವಳು ಅವನನ್ನು ಗುರುತಿಸಬಲ್ಲಳು. ಅವನು ಎಲ್ಲಿ ಹೋದ ಎಂಬುದನ್ನು ಪೊಲೀಸರಿಗೆ ತಿಳಿಸಬಲ್ಲಳು. ಅವಳು ಕೊಡುವ ಈ ಮಾಹಿತಿಯ ಮೇಲೆ ಪೊಲೀಸರು ಆತನನ್ನು ಪತ್ತೆ ಮಾಡಬಲ್ಲರು. ಅಪರಾಧಿಯನ್ನ ಪತ್ತೆ ಮಾಡಿದ ಮೇಲೆ ಅವನನ್ನು ಗುರುತಿಸುವಂತೆ ಪೊಲೀಸರು ಆಕೆಯನ್ನ ಕೇಳುತ್ತಾರೆ. ಖಂಡಿತವಾಗಿಯೂ ಅವನು ಅದೇ ವ್ಯಕ್ತಿ ಎಂದು ಖಾತ್ರಿ ಮಾಡಿಕೊಂಡು ಆಕೆ ಹಾಗೆ ಹೇಳಬೇಕು. ತಾನು ಆ ಕೃತ್ಯವನ್ನು ಮಾಡಿರುವುದಾಗಿ ಆ ವ್ಯಕ್ತಿ ಒಪ್ಪಿಕೊಳ್ಳುವುದಿಲ್ಲ. ''ನಾನು ಆ ಸಮಯದಲ್ಲಿ ಆ ಸ್ಥಳದಲ್ಲಿರಲಿಲ್ಲ, ಈ ಹೆಂಗಸು ತನಗೆ ಗೊತ್ತೇ ಇಲ್ಲ'' ಇತ್ಯಾದಿ ಹೇಳುತ್ತಾನೆ. ಆದರೆ ಅವನು ಅದೇ ವ್ಯಕ್ತಿ ಎಂಬುದನ್ನು ಸಾಧಿಸಬಲ್ಲ ಇತರ ಸಂಗತಿಗಳೂ ಇರುತ್ತವೆ. ಇವುಗಳನ್ನು ಸಾಧಿಸಲು ಅವನನ್ನು ಸಹ ವೈದ್ಯರಿಂದ ಪರೀಕ್ಷಿಸಲಾಗುವುದು. ಆತನ ಮುಖದ ಮೇಲೆ, ತೋಳು ಅಥವಾ ಬೆನ್ನಿನ ಮೇಲೆ ಪರಚಿರುವ ಗುರುತುಗಳು ಇರಬಹುದು. ಆತನ ಬಟ್ಟೆಗಳ ಮೇಲೆ ಹೊಸದಾಗಿ ಅಂಟಿರುವ ವೀರ್ಯದ ಗುರುತುಗಳಿರಬಹುದು. ಆತನ ಬಟ್ಟೆಯ ಮೇಲಿರುವ ರಕ್ತ, ಚರ್ಮ ಮತ್ತು ಕೂದಲು, ಆಕೆಯ ರಕ್ತ, ಚರ್ಮ ಮತ್ತು ಕೂದಲಿನೊಂದಿಗೆ ಸರಿಹೊಂದಬಹುದು. ಆಕೆಯ ಬಟ್ಟೆಗಳ ಮೇಲಿರುವ ರಕ್ತ ಮತ್ತು ಕೂದಲು ಆತನ ರಕ್ತ ಮತ್ತು ಕೂದಲಿನೊಂದಿಗೆ ಹೊಂದಾಣಿಕೆಯಾಗಬಹುದು. ಹೆಂಗಸು ಅತ್ಯಾಚಾರ ಅಥವಾ ಹಲ್ಲೆಯ ಬಗೆಗೆ ತಕ್ಷಣವೇ ದೂರು ಕೊಟ್ಟಲ್ಲಿ ಅವನಿಗೆ ಬಟ್ಟೆ ಬದಲಾಯಿಸಲು ಅಥವಾ ತೊಳೆದುಕೊಳ್ಳಲು ಸಮಯವಿರುವುದಿಲ್ಲ.

**ದೂರು ಸಲ್ಲಿಸಲು ಮಹಿಳೆಯು ಠಾಣೆಗೆ ಹೋದಾಗ ಪೊಲೀಸಿನವರು ಏನು ಮಾಡಬೇಕು ?**



**ತಪ್ಪಿತಸ್ಥನನ್ನು ಗುರುತಿಸಿ ಪೊಲೀಸರಿಗೆ ಸಹಾಯ ಮಾಡಿ**

ಅತ್ಯಾಚಾರದ ಬಗ್ಗೆ ಪೊಲೀಸ್ ಠಾಣೆಯ ಪ್ರಭಾರದಲ್ಲಿರುವ ಪೊಲೀಸ್ ಠಾಣಾಧಿಕಾರಿಗೆ ಒಬ್ಬ ಮಹಿಳೆ ದೂರು ಸಲ್ಲಿಸಿದಾಗ ಅವನು:

- ಪೊಲೀಸ್ ಠಾಣೆಯ ದಾಖಲಾತಿ ಪುಸ್ತಕದಲ್ಲಿ ದೂರನ್ನು ಬರೆದುಕೊಳ್ಳಬೇಕು
- ಬರೆದಿರುವುದನ್ನು ಮಹಿಳೆಗೆ ಓದಿ ಹೇಳಬೇಕು.
- ಬರೆಯಲಾಗಿರುವ ದೂರಿನ ಒಂದು ಪ್ರತಿಯನ್ನು ಪೊಲೀಸರು ಆಕೆಗೆ ಕೊಡಬೇಕು ಎಂಬುದಾಗಿ ಕಾನೂನು ತಿಳಿಸುತ್ತದೆ.

ಠಾಣಾಧಿಕಾರಿಯು ಮಹಿಳೆಯ ದೂರನ್ನು ಬರೆದುಕೊಳ್ಳದಿದ್ದರೆ, ಮಹಿಳೆಯು ಅತ್ಯಾಚಾರದ ಬಗ್ಗೆ ತಿಳಿಸಿ ಪೊಲೀಸ್ ಸೂಪರಿಂಟೆಂಡೆಂಟರಿಗೆ ಒಂದು ಪತ್ರ ಬರೆಯಬೇಕು. ಅಪರಾಧ ಜರುಗಿರುವುದು ಅವರಿಗೆ ಮನದಟ್ಟಾದರೆ ಸ್ವತಃ ತಾವೇ ಅದನ್ನು ತನಿಖೆ ಮಾಡ ತಕ್ಕದು ಅಥವಾ ತನಿಖೆ ಮಾಡಲು ಮತ್ತೊಬ್ಬ ಪೊಲೀಸ್‌ನವನಿಗೆ ಹೇಳತಕ್ಕದು.

ಪೊಲೀಸರು ಹೇಳಿಕೆಯನ್ನು ಬರೆದುಕೊಳ್ಳುವುದಕ್ಕೆ ಮೊದಲೇ ಅವರು ಆಕೆಯನ್ನು ವೈದ್ಯಕೀಯ ಪರೀಕ್ಷೆಗೆ ಕಳುಹಿಸಬಹುದು. ಅಲ್ಲದೆ, ಅವಳ ಬಟ್ಟೆಗಳನ್ನು ಪಡೆದುಕೊಂಡು ಮೊಹರು ಮಾಡಿದ ಚೀಲದಲ್ಲಿ ಹಾಕಿ, ಅವುಗಳ ಮೇಲೆ ಆ ವ್ಯಕ್ತಿಯ ವೀರ್ಯ, ರಕ್ತ ಮತ್ತು ಕೂದಲು ಇದೆಯೇ ಎಂಬುದನ್ನು ಕಂಡುಹಿಡಿಯಲು ಪ್ರಯೋಗಶಾಲೆಗೆ ಕಳುಹಿಸಿ ಕೊಡಬಹುದು.

**ಪೊಲೀಸ್ ಠಾಣೆಯಲ್ಲಿ ಪೊಲೀಸಿನವರು ಮಹಿಳೆಯನ್ನು ಪರೀಕ್ಷಿಸುವರೇ ?**

ಇಲ್ಲ, ಪೊಲೀಸರು ಮಹಿಳೆಯ ಶರೀರವನ್ನು ಮುಟ್ಟುವುದಕ್ಕೆ ಅವಕಾಶವಿಲ್ಲ. ಕೇವಲ ವೈದ್ಯರು ಮಾತ್ರ ಮಹಿಳೆಯನ್ನು ಪರೀಕ್ಷಿಸಬಹುದು.

**ಪೊಲೀಸರು ಗಂಡಸಿನ ವಿರುದ್ಧ ಮೊಕದ್ದಮೆ ದಾಖಲು ಮಾಡಿಕೊಳ್ಳಲು ನಿರಾಕರಿಸಿದರೆ ಏನು ಮಾಡಬೇಕು ?**

ಆ ಮಹಿಳೆಯು ಹೇಳುವುದನ್ನು ಕೇಳುವುದಕ್ಕೆ ಅಥವಾ ಆಕೆಯನ್ನು ನಂಬುವುದಕ್ಕೆ ಸಾಕಷ್ಟು ಕಾರಣವಿಲ್ಲವೆಂದು ಪೊಲೀಸ್ ಅಧಿಕಾರಿಯು ಭಾವಿಸಿ, ತನಿಖೆ ನಡೆಸಲು ನಿರಾಕರಿಸಬಹುದು. ಅಂಥ ಸಂದರ್ಭದಲ್ಲಿ ಮಹಿಳೆಯು ಸ್ಥಳೀಯ ಮ್ಯಾಜಿಸ್ಟ್ರೇಟರ ಬಳಿ ಹೋಗಿ ತನಗೆ ಆಗಿರುವ ಅನ್ಯಾಯವನ್ನು ಹೇಳಿಕೊಳ್ಳಬಹುದು. ಮ್ಯಾಜಿಸ್ಟ್ರೇಟರು ತನಿಖೆ ಮಾಡಬೇಕಾದ ಅಗತ್ಯವಿದೆ ಎಂದು ಭಾವಿಸಿದರೆ ತಾವೇ ಸ್ವತಃ ತನಿಖೆ ಮಾಡಬಹುದು ಅಥವಾ ತನಿಖೆ ಮಾಡುವಂತೆ ಪೊಲೀಸರಿಗೆ ಹೇಳಬಹುದು.

**ಮ್ಯಾಜಿಸ್ಟ್ರೇಟರು ಮಹಿಳೆಯನ್ನು ಪರೀಕ್ಷಿಸಬಹುದೇ ?**

ಇಲ್ಲ. ಅವರು ಆಕೆಯನ್ನು ಮುಟ್ಟುವಂತಿಲ್ಲ ಅಥವಾ ಆಕೆಯ ಶರೀರವನ್ನು ಪರೀಕ್ಷಿಸುವಂತಿಲ್ಲ. ಕೇವಲ ವೈದ್ಯರು ಮಾತ್ರ ಹಾಗೆ ಮಾಡಬಹುದು. ಅವರು ಪ್ರಶ್ನೆಗಳನ್ನು ಕೇಳಬಹುದು. ಅವಳಿಗೆ, ಮತ್ತು ಅತ್ಯಾಚಾರ ನಡೆಯುವುದಕ್ಕೆ ಮೊದಲು ಅಥವಾ ಅನಂತರ ಏನನ್ನಾದರೂ ನೋಡಿರಬಹುದಾದ ಯಾವನೇ ಸಾಕ್ಷಿಗೆ ಅವರು ಹಲವಾರು ಪ್ರಶ್ನೆಗಳನ್ನು ಕೇಳಬಹುದು. ಇದೆಲ್ಲವನ್ನೂ ಬರೆದುಕೊಂಡು ಅವರು ಅದಕ್ಕೆ ಸಹಿ ಹಾಕುತ್ತಾರೆ. ದೂರನ್ನು ಸಲ್ಲಿಸುತ್ತಿರುವ ವ್ಯಕ್ತಿಯೂ ಸಹ ಪತ್ರಕ್ಕೆ ಸಹಿ ಹಾಕುತ್ತಾಳೆ.

**ಪೊಲೀಸರು ಅವ್ಯಕ್ತಿಯನ್ನು ಹಿಡಿದ ತರುವಾಯ ಮುಂದೇನು ?**

ಅವರು ವ್ಯಕ್ತಿಯನ್ನು ಪ್ರಶ್ನಿಸಲು ಪೊಲೀಸ್ ಠಾಣೆಗೆ ಒಯ್ಯುತ್ತಾರೆ. ಅಪರಾಧದ ಬಗ್ಗೆ ತನಿಖೆ ನಡೆಸುತ್ತಿರುವಾಗ ಪೊಲೀಸರು ಆ ವ್ಯಕ್ತಿಯನ್ನು ಬಂದೀಖಾನೆಯಲ್ಲಿಡಬಹುದು. ಆದರೆ ವಿಚಾರಣೆಯ ಅವಧಿಯಲ್ಲಿ ಆ ವ್ಯಕ್ತಿ ಜಾಮೀನು ಪಡೆದು ಹೊರಬರಬಹುದು. ನಿಮಗೆ ಅಥವಾ ನಿಮ್ಮ ಕುಟುಂಬಕ್ಕೆ ತೊಂದರೆ ಕೊಡಬಹುದು. ನೀವು ಅಂಥ ಸಂದರ್ಭದಲ್ಲಿ ಆ ವಿಚಾರವನ್ನು ಪೊಲೀಸರಿಗೆ ಅಥವಾ ನ್ಯಾಯಾಲಯಕ್ಕೆ ತಿಳಿಸಬೇಕು.

**ತನಿಖೆ ಮತ್ತು ವಿಚಾರಣೆ ನಡೆಯುತ್ತಿರುವಾಗಲೆಲ್ಲ ಮಹಿಳೆಯು ಪೊಲೀಸ್ ಠಾಣೆಗೆ ಹೋಗಬೇಕೆ?**

ಇಲ್ಲ. ಪೊಲೀಸರು ಮಹಿಳೆಯನ್ನು ಯಾವುದೇ ಪೊಲೀಸ್ ಠಾಣೆಗೆ ಅಥವಾ ಯಾವುದೇ ಸ್ಥಳಕ್ಕೆ ಬರುವಂತೆ ಕೇಳಲಾಗದು. ಆಕೆಯ ಮನೆಗೇ ಬಂದು ಪ್ರಶ್ನೆಗಳನ್ನು ಕೇಳಬಹುದು ಅಷ್ಟೆ. ಪೊಲೀಸರು ವಿಚಾರಣೆ ಮಾಡಬೇಕು. ಪ್ರಶ್ನೆಗಳನ್ನು ಕೇಳಬೇಕು. ಮತ್ತು ಸಾಕ್ಷಿಗಳ ಜೊತೆ ಮಾತನಾಡಬೇಕು. ಆ ಹೆಂಗಸು ಮುಖ್ಯ ಸಾಕ್ಷಿಯಾಗಿರುತ್ತಾಳೆ. ಆಕೆಯು ದೂರು ನೀಡದೆ ಯಾವುದೇ ತನಿಖೆಯನ್ನು ನಡೆಸಲಾಗುವುದಿಲ್ಲ. ಅವರು ಅದಕ್ಕಾಗಿ ಅವಳನ್ನು ಬಲವಂತಪಡಿಸತಕ್ಕುದಲ್ಲ ಅಥವಾ

ಹಿಂಸಿಸತಕ್ಕುದಲ್ಲ. ಮಹಿಳೆಯನ್ನು ಪೊಲೀಸ್ ಠಾಣೆಗೆ ಬರುವಂತೆ ಕೇಳುವುದು ತಪ್ಪು ಮತ್ತು ಅದಕ್ಕಾಗಿ ಪೊಲೀಸರನ್ನು ಶಿಕ್ಷೆಗೆ ಗುರಿಪಡಿಸಬಹುದು.

**ಅತ್ಯಾಚಾರಿಯು ಪ್ರಭಾವಶಾಲಿ ವ್ಯಕ್ತಿಯಾಗಿದ್ದರೆ ?**

ಅತ್ಯಾಚಾರಿಯು ಪ್ರಭಾವಶಾಲಿ ವ್ಯಕ್ತಿಯಾಗಿದ್ದರೆ, ಅವನ ಅಪರಾಧವನ್ನು ಮುಚ್ಚಲು ಯತ್ನಿಸುವ ಸ್ನೇಹಿತರು ಠಾಣೆಯಲ್ಲಿ ಹಾಗೂ ಹೊರಗಡೆಯಲ್ಲಿ ಇರುತ್ತಾರೆ. ಅಂಥ ಸನ್ನಿವೇಶದಲ್ಲಿ ನಿಮ್ಮ ರಾಜ್ಯದ ಮುಖ್ಯಮಂತ್ರಿಗೆ, ನಿಮ್ಮ ರಾಜ್ಯದ ಪೊಲೀಸ್ ಮುಖ್ಯಸ್ಥರಿಗೆ, ನಿಮ್ಮ ಸ್ಥಳೀಯ ವಿಧಾನಸಭಾ ಸದಸ್ಯರಿಗೆ ಮತ್ತು ಜಿಲ್ಲಾಧಿಕಾರಿಯವರಿಗೆ ಅತ್ಯಾಚಾರದ ಬಗ್ಗೆ ತಿಳಿಸಿ ಹಲವಾರು ಪತ್ರಗಳನ್ನು ಬರೆಯುವುದು ಒಳ್ಳೆಯ ಉಪಾಯ.

ಅಲ್ಲದೆ, ನಿಮ್ಮ ಪ್ರದೇಶದಲ್ಲಿನ ಯಾವುದೇ ಸಮಾಜ ಸೇವಾಕರ್ತನಿಗೂ ಹೇಳಬಹುದು. ಸ್ಥಳೀಯ ವೃತ್ತಪತ್ರಿಕೆಗೆ ಹಾಗೂ ರಾಷ್ಟ್ರಮಟ್ಟದ ಪತ್ರಿಕೆಗೆ ಸಹ ಬರೆಯಬಹುದು. ಹಾಗೆ ಮಾಡುವುದರಿಂದ ಅಪರಾಧಿಯು ಬಯಲಿಗೆ ಬರುತ್ತಾನೆ ಮತ್ತು ತನಿಖೆಯನ್ನು ನಡೆಸಲು ಸಹಾಯಕವಾಗುವುದು. ಆದರೆ ಯಾವುದೇ ಪತ್ರಿಕೆಯು ಅತ್ಯಾಚಾರಕ್ಕೊಳಗಾದ ಮಹಿಳೆಯ ಹೆಸರನ್ನು ಪ್ರಕಟಿಸಬಾರದು. ಹಾಗೆ ಮಾಡುವುದು ಒಂದು ಅಪರಾಧ.



ಅಧಿಕಾರದಲ್ಲಿರುವವರಿಗೆ ನಿಮ್ಮ ದೂರಿನ ಬಗ್ಗೆ ಬರೆಯಿರಿ

### ಪತ್ರದಲ್ಲಿ ಏನನ್ನು ತಿಳಿಸಬೇಕು ?

ಪತ್ರವನ್ನು ಜಾಗರೂಕತೆಯಿಂದ ಮತ್ತು ಸ್ವಚ್ಛವಾಗಿ ಬರೆಯಿರಿ. ಪತ್ರ ಸಂಕ್ಷಿಪ್ತವಾಗಿರಲಿ. ನೀವು ಯಾರೆಂಬುದನ್ನು ತಿಳಿಸಿ. ಆ ಮನುಷ್ಯ ಯಾರೆಂದು ತಿಳಿಸಿ. ಅಪರಾಧವನ್ನು ಪ್ರಾರಂಭದಿಂದ ಅಂತ್ಯದವರೆಗೆ ವಿವರಿಸಿ. ಅನಂತರ ಪೊಲೀಸ್ ಠಾಣೆಯಲ್ಲಿ ಅಪರಾಧದ ಬಗ್ಗೆ ನೀವು ಹೇಳಿದುದನ್ನು ಕೇಳಿದ ವ್ಯಕ್ತಿ ಯಾರೆಂಬುದನ್ನು ತಿಳಿಸಿ. ನಿಮ್ಮ ಬಳಿ ವೈದ್ಯಕೀಯ ಪ್ರಮಾಣಪತ್ರವಿದ್ದರೆ ಅದರ ಒಂದು ಪ್ರತಿಯನ್ನು ಕಳಿಸಿ. ನಿಮ್ಮನ್ನು ಯಾರಾದರೂ ಹೆದರಿಸಿದರೆ ಅದರ ಬಗ್ಗೆ ಬರೆಯಿರಿ.

**ಹೆಂಗಸು ಅತ್ಯಾಚಾರಿಯನ್ನ ನ್ಯಾಯಾಲಯಕ್ಕೆ ಕರೆದುಕೊಂಡು ಬರುವ ಅಗತ್ಯವಿದೆಯೇ ?**

ಇಲ್ಲ, ಮಹಿಳೆಯು ದೂರನ್ನು ಸಲ್ಲಿಸಿದ ಮೇಲೆ ಅದರ ಬಗ್ಗೆ ತನಿಖೆ ಮಾಡುವುದು, ಅತ್ಯಾಚಾರವೆಸಗಿದ ಬಗ್ಗೆ ರುಜುವಾತುಪಡಿಸಲು ಸಾಧ್ಯವಾದದ್ದನ್ನೆಲ್ಲ ಮಾಡುವುದು ಪೊಲೀಸರ



ತಪ್ಪಿತಸ್ಥನನ್ನು ಹಿಡಿದು ಕಾನೂನು ಪ್ರಕಾರ ದಂಡಿಸಬೇಕು

ಕರ್ತವ್ಯವಾಗಿರುತ್ತದೆ. ಆದರೆ ನ್ಯಾಯಾಲಯದ ಅನುಮತಿ ಪಡೆದು ಮಹಿಳೆಯು ತನ್ನ ಸ್ವಂತ ವಕೀಲರನ್ನು ಇಡಬಹುದು. ಆ ವಕೀಲರು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಿ ವಕೀಲರಿಗೆ ಸಹಾಯ ಮಾಡಬಹುದು.

**ನ್ಯಾಯಾಲಯವು ಮೊಕದ್ದಮೆಯನ್ನು ಹೇಗೆ ತೀರ್ಮಾನ ಮಾಡುತ್ತದೆ. ?**

ನ್ಯಾಯಾಲಯವು ಎರಡೂ ಪಕ್ಷಗಳು ಅಂದರೆ ಫಿರ್ಯಾಧಿ (ಮಹಿಳೆ) ಮತ್ತು ಆರೋಪಿ (ಪುರುಷ) ಇಬ್ಬರ ಅಹವಾಲನ್ನು ಕೇಳುತ್ತದೆ. ಅಲ್ಲದೆ, ನ್ಯಾಯಾಲಯವು ಅತ್ಯಾಚಾರ ನಡೆದ ಸಮಯದಲ್ಲಿ ಅದನ್ನು ನೋಡಿರಬಹುದಾದಂಥ ಇತರ ವ್ಯಕ್ತಿಗಳ ಸಾಕ್ಷ್ಯವನ್ನು ಪಡೆದುಕೊಳ್ಳುತ್ತದೆ. ವೈದ್ಯರ ವರದಿಯನ್ನು ಪರಿಶೀಲಿಸುತ್ತದೆ. ಈ ಎಲ್ಲಾ ಸಂಗತಿಗಳ ಆಧಾರದ ಮೇಲೆ ನ್ಯಾಯಾಲಯವು ಮೊಕದ್ದಮೆಯನ್ನು ಇತ್ಯರ್ಥಗೊಳಿಸುತ್ತದೆ. ಅಪರಾಧ ನಡೆದಿದೆ ಎಂಬುದಾಗಿ ನ್ಯಾಯಾಲಯಕ್ಕೆ ಕಂಡುಬಂದರೆ ಆ ವ್ಯಕ್ತಿಯು ಖಂಡಿತವಾಗಿಯೂ ಶಿಕ್ಷೆಗೆ ಗುರಿಯಾಗುತ್ತಾನೆ.

ಮಹಿಳೆಯು ಏನನ್ನೂ ಬಚ್ಚಿಡದೆ ಅತ್ಯಾಚಾರದ ಬಗ್ಗೆ ತಿಳಿಸಲು ಮುಂದಾಗಬೇಕು. ಇಲ್ಲದಿದ್ದರೆ ವ್ಯಕ್ತಿಯು ಆರೋಪಮುಕ್ತನಾಗಿ ಅವಳ ಮೇಲೆ ಅಥವಾ ಮತ್ತೊಬ್ಬ ಮಹಿಳೆ ಮೇಲೆ ಅದೇ ಕೃತ್ಯವನ್ನೆಸಗಬಹುದು.





# ಬಲಾತ್ಕಾರದ ಅಪಹರಣ

ಕಮಲವ್ವನಿಗೆ ರಾಮು ಎಂಬ ಐದು ವರ್ಷದ ಮಗುವಿದ್ದಾನೆ. ಒಂದು ದಿನ ರಾಮು ಊರಿನ ಕೆರೆಯ ಬಳಿ ಆಡುತ್ತಿದ್ದಾಗ ಇಬ್ಬರು ವ್ಯಕ್ತಿಗಳು ಆತನನ್ನು ಎತ್ತಿಕೊಂಡು ಹೋದರು. ಆಗಿನಿಂದ ರಾಮು ಕಣ್ಮರೆಯಾಗಿದ್ದಾನೆ. ಕಮಲವ್ವ ಮತ್ತು ಅವಳ ಗಂಡ ಸುತ್ತಮುತ್ತಲ ಹಳ್ಳಿಯಲ್ಲಿ ವಿಚಾರಿಸಿದರು. ಮಗುವನ್ನ ಕದ್ದವರು ನಗರದ ಕಡೆಗೆ ಹೋದರೆಂದು ಅವರಿಗೆ ತಿಳಿಯಿತು. ಮಗುವನ್ನ ಸರಿಯಾಗಿ ನೋಡಿಕೊಳ್ಳದಿದ್ದುದು ನಮ್ಮ ತಪ್ಪು, ನಮ್ಮ ದುರಾದೃಷ್ಟ ಎಂದು ಹಳಿದುಕೊಂಡರು. ನಾವು ಈಗೇನೂ ಮಾಡಲು ಸಾಧ್ಯವಿಲ್ಲ, ವಿಧಿ ನಮ್ಮ ಮಗುವನ್ನು ನಮ್ಮಿಂದ ಸೆಳೆದುಕೊಂಡು ಹೋಯಿತು ಎಂದು ಕಮಲವ್ವ ಮತ್ತು ಆಕೆಯ ಗಂಡ ಮರುಗಿದರು.

ರಾಮುವಿನ ಮಾವ ನಗರದಿಂದ ಬಂದರು. ''ಅಕ್ಕ ವಿಧಿಯನ್ನು ಬಯ್ಯಬೇಡ. ಇದು ಕಾನೂನಿನ ವಿಚಾರ'' ಎಂದು ಬುದ್ಧಿವಾದ ಹೇಳಿದರು.

ಕಮಲವ್ವ ಕೇಳಿದರು. ''ಅದು ಹೇಗೆ ?''

ರಾಮುವಿನ ಮಾವ ಹೇಳಿದರು, ''ಒಬ್ಬ ಅಪ್ರಾಪ್ತ ಹುಡುಗನನ್ನು ಅಥವಾ ಹುಡುಗಿಯನ್ನು ಪೋಷಕರ ಅನುಮತಿ ಇಲ್ಲದೆ ಎತ್ತಿಕೊಂಡು ಹೋಗುವುದು ಅಥವಾ ಪುಸಲಾಯಿಸಿ ಕರೆದುಕೊಂಡು



ಮಗುವನ್ನು ಅಪಹರಿಸುವುದು ಅಪರಾಧ

ಹೋಗುವುದು ಕ್ರಿಮಿನಲ್ ಅಪರಾಧವಾಗುತ್ತದೆ. ಇದನ್ನು ಅಪಹರಣ ಎಂದು ಕರೆಯಲಾಗುತ್ತದೆ. ಅಪಹರಣಕಾರನನ್ನು ಕಾರಾವಾಸದ ಶಿಕ್ಷೆಯಿಂದ ದಂಡಿಸಬಹುದು.

ಕಮಲವ್ವ ಕೇಳಿದಳು, ''ಅಪಹರಣಕಾರನನ್ನು ಹಿಡಿಯುವುದು ಹೇಗೆ ?''

ರಾಮುವಿನ ಮಾವ ಹೇಳಿದ. ''ಅಪಹರಣವಾದ ತಕ್ಷಣವೇ ನೀವು ಪೊಲೀಸರಿಗೆ ದೂರು ನೀಡಬೇಕು.''

- 'ಮಗುವಿನ ಹೆಸರು
- ಮಗುವಿನ ಲಕ್ಷಣಗಳು, ಹಾಕಿಕೊಂಡಿದ್ದ ಬಟ್ಟೆಗಳ ವಿವರಣೆ
- ಹುಟ್ಟಿನಿಂದ ಬಂದ ಗುರುತು ಅಥವಾ ಕಲೆ (ಮಗುವಿನ ಗುರುತಿನ ಚಿಹ್ನೆಗಳು)
- ನಿಮ್ಮ ಹೆಸರು ಮತ್ತು ವಿಳಾಸ



ಮಗುವಿನ ಸಂಬಂಧಿಸಿದ ಈ ಮಾಹಿತಿಯನ್ನು ಮಗುವು ಕಾಣೆಯಾದ ತಕ್ಷಣವೇ ಪೊಲೀಸರಿಗೆ ನೀಡಬೇಕು.

ಕಮಲವ್ವ: ನಮ್ಮ ರಾಮು ಅಪ್ರಾಪ್ತ ವಯಸ್ಕನೇ ?

ರಾಮುವಿನ ಮಾವ: ಹೌದು. 16 ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲಕ ಮತ್ತು 18 ವರ್ಷಗಳಿಗಿಂತ ಕಡಿಮೆ ವಯಸ್ಸಿನ ಬಾಲಕಿಯು ಅಪ್ರಾಪ್ತ ವಯಸ್ಕರೆನಿಸಿಕೊಳ್ಳುತ್ತಾರೆ. ಎಂದರೆ ಅವರು ಇನ್ನೂ ಪೋಷಕರ ಪೋಷಣೆಯಲ್ಲಿರಬೇಕಾದವರು ಎಂದರ್ಥ. ಅಪ್ರಾಪ್ತ ವಯಸ್ಸಿನ ಮಗುವನ್ನು ಅವನು/ಅವಳು ಸ್ವತಃ ಒಪ್ಪಿಕೊಂಡಿದ್ದರೂ ಸಹ ಪುಸಲಾಯಿಸಿ ಕರೆದುಕೊಂಡು ಹೋಗುವುದು ಕಾನೂನಿನ ಕಣ್ಣಿನಲ್ಲಿ ಅಪರಾಧವಾಗುತ್ತದೆ.

ರಾಮುವಿನ ತಂದೆ: ಪೋಷಕರೆಂದರೇನು ?

ಮಾವ: ಪೋಷಕರೆಂದರೆ, ತಂದೆತಾಯಿಗಳು ಅಥವಾ ಮಗುವನ್ನು ಪೋಷಿಸುವ ಹೊಣೆಹೊತ್ತವರು. ನೀನು ರಜೆಯಲ್ಲಿ ರಾಮುವನ್ನು ನಮ್ಮ ಮನೆಯಲ್ಲಿ ಬಿಟ್ಟರೆ ನಾನು ಪೋಷಕನಾಗುತ್ತೇನೆ. ವಯಸ್ಕನಿಗೆ ಪೋಷಕರಿರುವುದಿಲ್ಲ. ಅವರು ತಮಗೆ ಇಷ್ಟಬಂದ ಕಡೆಗೆ ಹೋಗಬಹುದು.

ರಾಮುವಿನ ತಂದೆ: ''ಅನೇಕ ಸಲ ನಿಮಗೆ ಗೊತ್ತಿರುವ ಜನಗಳು ನಿಮ್ಮ ಅನುಮತಿಯನ್ನು ಪಡೆದುಕೊಂಡು ಮಗುವನ್ನು ಕರೆದುಕೊಂಡು ಹೋಗುತ್ತಾರೆ. ನಂತರ ಮೋಸ ಮಾಡುತ್ತಾರೆ. ಕಾನೂನು ಅಂತಹವರನ್ನು ದಂಡಿಸುತ್ತದೆಯೇ ?


ಮೋಸದಿಂದ ಅಪ್ರಾಪ್ತ ವಯಸ್ಕರನ್ನು ಕರೆದುಕೊಂಡು ಹೋಗುವುದು ಒಂದು ಅಪರಾಧ

ರಾಮುವಿನ ಮಾವ: ಹೌದು, ಖಂಡಿತವಾಗಿ. ನಿನಗೆ ಕರಿಸಿದ್ದವ್ವನ ಪ್ರಕರಣ ನೆನಪಿಲ್ಲವೇ ? ಅವಳ ನೆರೆಮನೆಯ ಪಕೀರಪ್ಪ ಹುಬ್ಬಳ್ಳಿಯಲ್ಲಿ ಕೆಲಸ ಮಾಡುತ್ತಿದ್ದ. ಅವನು ರಜಕ್ಕೆ ಹಳ್ಳಿಗೆ ಬಂದಾಗ ಕರಿಸಿದ್ದವ್ವನನ್ನ ಭೇಟಿಯಾದ. ಆಕೆಯ ಮಗಳಾದ

ಈರವ್ವನನ್ನ ತನ್ನೊಡನೆ ಕಳುಹಿಸಿಕೊಟ್ಟರೆ ಹುಬ್ಬಳ್ಳಿಯಲ್ಲಿ ಒಳ್ಳೆಯ ಕೆಲಸವನ್ನು ಕೊಡಿಸುತ್ತೀನಿ ಅಂತ ನಂಬಿಸಿದ. ಏನೂ ಅರಿಯದ ಕರಿಸಿದ್ದವ್ವ ಒಪ್ಪಿಬಿಟ್ಟಳು. ಪಕೀರಪ್ಪ ಆ ಹುಡುಗಿಯನ್ನ ಹುಬ್ಬಳ್ಳಿಗೆ ತಂದು ವೇಶ್ಯಾವಾಟಿಕೆಗೆ ಮಾರಿಬಿಟ್ಟ. ಒಂದು ದಿನ ಈರವ್ವ ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಹುಬ್ಬಳ್ಳಿ ಪೊಲೀಸರ ಸಹಾಯದಿಂದ ಹಳ್ಳಿಗೆ ವಾಪಸು ಬಂದಳು. ಪೊಲೀಸರು ಪಕೀರಪ್ಪನನ್ನ ದಸ್ತಗಿರಿ ಮಾಡಿದರು. ಪಕೀರಪ್ಪ ತಾನು ಈರವ್ವನನ್ನ ಅಪಹರಿಸಲೇ ಇಲ್ಲ ಅಂತಲೂ, ಕರಿಸಿದ್ದವ್ವನೇ ಒಪ್ಪಿ ಕಳಿಸಿದಳೆಂತಲೂ ಪೊಲೀಸರಿಗೆ ಹೇಳಿಕೆ ಕೊಟ್ಟ.

ಆದರೂ ಪಕೀರಪ್ಪ ಅಪರಾಧಿ ಎಂದು ಕೋರ್ಟು ತೀರ್ಮಾನ ಕೊಟ್ಟಿತು. ಯಾಕೆಂದರೆ:

- ಈರವ್ವ ಒಬ್ಬ ಅಪ್ರಾಪ್ತ ಹುಡುಗಿ
- ಪಕೀರಪ್ಪ ವಂಚನೆಯಿಂದ ಈರವ್ವನ ತಾಯಿಯ ಒಪ್ಪಿಗೆ ಪಡೆದಿದ್ದ
- ಪಕೀರಪ್ಪ ಈರವ್ವನನ್ನ ವೇಶ್ಯಾವಾಟಿಕೆಗೆ ಮಾರಿದ್ದ.

**ಹುಡುಗಿಯರನ್ನ ವೇಶ್ಯಾವೃತ್ತಿಗೆಳೆಸಲು ಮಾರಾಟ ಮಾಡುವ ಯಾರೇ ಆಗಲಿ ಕ್ರಿಮಿನಲ್ ಅಪರಾಧದ ಆರೋಪಿಗಳಾಗುತ್ತಾರೆ ಮತ್ತು ಹತ್ತು ವರ್ಷಗಳವರೆಗಿನ ಕಾರಾಗಾರ ಮತ್ತು ದಂಡದಿಂದ ಶಿಕ್ಷೆಗೊಳಗಾಗುತ್ತಾರೆ.**

**ಅನೈತಿಕ ವ್ಯವಹಾರ (ನಿಷೇಧ) ಅಧಿನಿಯಮ, 1946** ಎಂದು ಒಂದು ಕಾನೂನು ಸಹ ಇದೆ.

- ವೇಶ್ಯಾವೃತ್ತಿ ನಡೆಸಲೆಂದು ಒಬ್ಬರನ್ನು ಮಾರುವ ಅಥವಾ ಕೊಂಡುಕೊಳ್ಳುವ ಅಥವಾ ಅದಕ್ಕೆಂದು ಪ್ರೇರೇಪಿಸುವ ಯಾರೇ ಆಗಲಿ ಮೂರರಿಂದ ಹದಿನಾಲ್ಕು ವರ್ಷಗಳವರೆಗಿನ ಕಾರಾವಾಸ ಮತ್ತು ದಂಡದ ಶಿಕ್ಷೆಗೊಳಗಾಗುತ್ತಾರೆ.

ರಾಮುವಿನ ಮಾವ: ಇದನ್ನೆಲ್ಲಾ ಆಮೇಲೆ ಮಾತನಾಡೋಣ ಮೊದಲು ಠಾಣೆಗೆ ಹೋಗಿ ದೂರು ಕೊಡೋಣ ನಡೆಯಿರಿ. ರಾಮುವಿನ ತಂದೆ ಠಾಣೆಯಲ್ಲಿ ದೂರು ಸಲ್ಲಿಸಿದರು. ಪೊಲೀಸರು ರಾಮುವಿನ ಭಾವಚಿತ್ರವನ್ನು ಕೇಳಿದರು. ಕೆಲವು ದಿವಸಗಳ ನಂತರ ಪೊಲೀಸರು ಬಂದು, ರಾಮುವಿನ ತಂದೆಯನ್ನ ಪೊಲೀಸ್ ಠಾಣೆಗೆ ಬರಹೇಳಿದರು. ರಾಮುವಿನ ತಂದೆ ಮತ್ತು ಮಾವನು ಪೊಲೀಸ್ ಠಾಣೆಗೆ ಹೋದಾಗ ಅಲ್ಲಿ ರಾಮು ಕುಳಿತಿದ್ದ. ತೀರ ನಿತ್ರಾಣಗೊಂಡಿದ್ದ; ಹೆದರಿಬಿಟ್ಟಿದ್ದ. ಅಪ್ಪನನ್ನು ನೋಡಿದತಕ್ಷಣವೇ ಅಳಲು ಪ್ರಾರಂಭಿಸಿದ. ಅವನನ್ನು ಅಪಹರಿಸಿದವರು ರಾಮುನಿಗೆ ಹಿಂಸೆ ನೀಡಿದ್ದರು.



**ಪೊಲೀಸರು, ನಗರದಲ್ಲಿ ರಾಮು ಬಿಕ್ಷೆ ಬೇಡುತ್ತಿರುವುದನ್ನು ನೋಡಿದರು**

ಪೊಲೀಸ್ ಇನ್ಸ್‌ಪೆಕ್ಟರ್: ನೀವು ಅಪರಾಧವನ್ನು ತಕ್ಷಣವೇ ತಿಳಿಸಿದುದು ಮತ್ತು ರಾಮುವಿನ ಭಾವಚಿತ್ರವನ್ನು ಕೊಟ್ಟಿದ್ದೂ ಒಳ್ಳೆಯದಾಯಿತು. ಹುಡುಗನ ಬಗ್ಗೆ ಎಲ್ಲ ಪೊಲೀಸ್ ಠಾಣೆಗಳಿಗೂ ತಿಳಿಸಿದ್ದೆವು. ರಾಮು ಮತ್ತು ಇತರ ಮಕ್ಕಳು ಬೀದಿಗಳಲ್ಲಿ ಭಿಕ್ಷೆ ಬೇಡುತ್ತಿದ್ದುದನ್ನು ಒಬ್ಬ ಪೊಲೀಸನು ಕಂಡ. ಮಕ್ಕಳು ಹೆದರಿದ್ದರು. ತಮಗೆ ಅಮಾನುಷವಾಗಿ ಹೊಡೆಯುತ್ತಿದ್ದರೆಂದು ಹೇಳಿದರು. ಕೆಲವು ಮಕ್ಕಳ ಕೈಕಾಲುಗಳನ್ನು ಕತ್ತರಿಸಲಾಗಿತ್ತು. ಪೊಲೀಸರು ಅಪಹರಣಕಾರರ ಗುಪ್ತ ಸ್ಥಳಕ್ಕೆ ಧಾಳಿ ಮಾಡಿ ಎಲ್ಲರನ್ನೂ ಬಂಧಿಸಿದರು. ಈಗ ಅವರೆಲ್ಲಾ ಬಂದಿಖಾನೆಯಲ್ಲಿ 10 ವರ್ಷಗಳ ಸೆರೆಮನೆ ವಾಸ ಅನುಭವಿಸುತ್ತಿದ್ದಾರೆ. ಮಕ್ಕಳ ಕೈಕಾಲು ಕತ್ತರಿಸಿದ್ದವರು ಅಜೀವ ಕಾರಾವಾಸ ಅನುಭವಿಸುತ್ತಿದ್ದಾರೆ.

ರಾಮುವಿನ ತಂದೆ ಪೊಲೀಸ್ ಇನ್ಸ್‌ಪೆಕ್ಟರ್ ಅವರಿಗೆ ವಂದನೆಗಳನ್ನು ಸಲ್ಲಿಸಿ ಮನೆಗೆ ಹೊರಟರು.

ಪೊಲೀಸ್ ಇನ್ಸ್‌ಪೆಕ್ಟರ್ : ನೀವೆಲ್ಲರೂ ಕೆಲವು ವಿಚಾರಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

- ಪ್ರತಿಯೊಂದು ಮಗುವಿಗೂ ಅವನ/ಅವಳ ಹೆಸರು, ತಂದೆ ತಾಯಿಗಳ ಹೆಸರು, ಗ್ರಾಮದ ಹೆಸರನ್ನು ತಿಳಿದಿರುವಂತೆ ಮಾಡಿ.

- ಮಕ್ಕಳನ್ನು ಮನೆಯಲ್ಲಿ, ಶಾಲೆಯಲ್ಲಿ, ಪ್ರೀತಿಯಿಂದ ನೋಡಿಕೊಳ್ಳಬೇಕು. ಹಾಗೆ ಮಾಡುವುದರಿಂದ ಅವರು ಮನೆಯಿಂದ ಓಡಿ ಹೋಗುವುದಿಲ್ಲ. ಕೆಟ್ಟ ಜನಗಳ ಕೈಗೆ ಬೀಳುವುದಿಲ್ಲ.

- ಅಪರಿಚಿತರ ಬಗ್ಗೆ ಎಚ್ಚರಿಕೆಯಿಂದ ಇರಲು ನಿಮ್ಮ ಮಕ್ಕಳಿಗೆ ತಿಳಿಸಿ. ಯಾರೇ ಅಪರಿಚಿತರಿಂದ ಕೊಡುಗೆ ಸಿಹಿತಿಂಡಿ ತೆಗೆದುಕೊಳ್ಳಬಾರದೆಂದು ತಿಳಿಸಿಹೇಳಿ.

- ನಿಮ್ಮ ಮಗುವನ್ನು ಅಪಹರಿಸಿದ್ದರೆ, ನೀವು ತಕ್ಷಣವೇ ಪೊಲೀಸರಿಗೆ ತಿಳಿಸಬೇಕು.

ಈಗ ರಾಮುವಿನ ಕುಟುಂಬ ಸಂತೋಷದಿಂದಿದೆ. ಅವರು ತಮ್ಮ ನೆರೆಯವರಿಗೆಲ್ಲಾ ಸಿಹಿ ಹಬ್ಬ ಮಾಡಿದರು.



ಮಕ್ಕಳು ಅಪರಿಚಿತ ವ್ಯಕ್ತಿಗಳಿಂದ ಸಿಹಿ ತಿಂಡಿ, ಕೊಡುಗೆಗಳನ್ನು ಸ್ವೀಕರಿಸಬಾರದು

ಹೀಗಿರುವಾಗ ಕಮಲವ್ವ ಒಂದು ದಿನ ಪಕ್ಕದ ಮನೆ ರೆಹನಾಳ ಹತ್ತಿರ ಹೋದರು. ರೆಹನಾಳ ಕಣ್ಣಲ್ಲಿ ನೀರು ತುಂಬಿಕೊಂಡಿತ್ತು. ಅವಳು, ''ಅಕ್ಕ, ನಿನಗೆ ನಿನ್ನ ಮಗ ತಕ್ಷಣವೇ ಸಿಕ್ಕಿದ. ನ್ಯಾಯಾಲಯ ಮತ್ತು ಪೊಲೀಸರು ನಿನಗೆ ಸಹಾಯ ಮಾಡಿದರು. ನಮ್ಮ ಫರೀದಾ 20 ವರ್ಷ ವಯಸ್ಸಿನವಳಾಗಿರದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಅಪ್ರಾಪ್ತ ವಯಸ್ಕಳಾಗಿದ್ದಿದ್ದರೆ ಆ ಹಾಳು ಜಾವೇದನ ಹಿಡಿತಕ್ಕೆ ಸಿಕ್ಕುವುದರಿಂದ ತಪ್ಪಿಸಬಹುದಿತ್ತು'' ಅಂದಳು. ಕಮಲವ್ವ ಅದೇನು ಬಿಡಿಸಿಹೇಳು ಅಂದಳು. ''ನಮ್ಮ ದುರಾದೃಷ್ಟ ನಿನಗೆ ಚೆನ್ನಾಗಿ ಗೊತ್ತಿದೆ. ಎರಡು ತಿಂಗಳ ಹಿಂದೆ, ನಮ್ಮ ಸಂಬಂಧಿಯಾದ ಜಾವೇದ್, ಹೊಲಿಗೆ ಶಾಲೆಗೆ ಸೇರಿಸುವುದಾಗಿ ಸುಳ್ಳುಹೇಳಿ ಮೋಸದಿಂದ ಫರೀದಾಳನ್ನು ಕರೆದುಕೊಂಡು ಹೋದ. ಜಾವೇದ್ ಅವಳನ್ನು ಮದುವೆಯಾಗಲು ಬಯಸಿದ್ದ. ಆದರೆ ಅವನು ಅವಿದ್ಯಾವಂತ ಮತ್ತು ಅಪ್ರಯೋಜಕ ಎಂದು ಅವನಿಗೆ ಮದುವೆ ಮಾಡಿಕೊಡಲು ನಾವು ಇಲ್ಲ ಅಂದಿದ್ದೆವು. ಈಗ ನಮ್ಮನ್ನೆ ಹೆದರಿಸುತ್ತಿದ್ದಾನೆ. ಅವರಿಬ್ಬರೂ ಈಗ ಹುಬ್ಬಳ್ಳಿಯಲ್ಲಿದ್ದಾರೆ. ಫರೀದಾ ಮನೆಯಿಂದಾಚೆ ಹೋಗೋದಕ್ಕೆ ಬಿಡ್ತಾ ಇಲ್ಲ ಆ ಹಾಳು ಜಾವೇದ.



ಯಾವುದೇ ವ್ಯಕ್ತಿಯನ್ನು ಬಲವಂತದಿಂದ ಒಳಗೆ ಕೂಡಿ ಹಾಕುವುದು ಅಪರಾಧ

O126.

ನಾವು ಅಸಹಾಯಕರಾಗಿದ್ದು ನಮ್ಮ ಮಗಳಿಗಾಗಿ ಏನನ್ನೂ ಸಹ ಮಾಡಲಾರದವರಾಗಿದ್ದೇವೆ ಎನಿಸುತ್ತದೆ. ಫರೀದಾ ಕೂಡ ಹೆದರಿಬಿಟ್ಟಿದ್ದಾಳೆ. ಅವಳೂ ಏನೂ ಮಾಡಲಾರದ ಸ್ಥಿತಿಯಲ್ಲಿದಾಳೆ. ಜಾವೇದ ಅವಳನ್ನು ಹಾಳು ಮಾಡಿದ್ದಾನೆ'' ಎಂದು ಅತ್ತಳು ರೆಹಾನಾ.

ಇದನ್ನು ಕೇಳಿದ ರಾಮುವಿನ ತಾಯಿಗೆ ತುಂಬಾ ಕೆಟ್ಟೆನಿಸಿತು. ಪಾಪಾ ಫರೀದಾ ಬಹಳ ಮುಗ್ಧೆ, ನಾವು ಅವಳ ನೆರವಿಗೆ ಹೋಗಬೇಕು ಎಂದುಕೊಂಡಳು. ಮನೆಗೆ ಹೋಗಿ ರಾಮುವಿನ ಮಾವನ ಸಲಹೆ ಕೇಳಿದಳು. ಆತನು, ''ಏನು ಮಾಡುವುದೆಂದು ಖಚಿತವಾಗಿ ಗೊತ್ತಾಗುತ್ತಿಲ್ಲ. ಪೊಲೀಸ್ ಇನ್ಸ್‌ಪೆಕ್ಟರ್ ಬಹಳ ಒಳ್ಳೆಯ ಮನುಷ್ಯ. ಇದಕ್ಕೆ ಏನಾದರೂ ಮಾರ್ಗವಿದೆಯೇ ಎಂಬುದನ್ನು ಅವರು ಖಂಡಿತ ಹೇಳುತ್ತಾರೆಂದು ನನಗನ್ನಿಸುತ್ತದೆ'' ಎಂದು ಹೇಳಿದರು.

ಮರುದಿನ ಅವರು ಪೊಲೀಸ್ ಇನ್ಸ್‌ಪೆಕ್ಟರ್ ಅವರನ್ನು ಭೇಟಿ ಮಾಡಲು ಹೋದರು. ಇನ್ಸ್‌ಪೆಕ್ಟರ್ ಹೀಗೆಂದರು.

- ಒಬ್ಬ ವಯಸ್ಕ ವ್ಯಕ್ತಿಯನ್ನು ಯಾವುದೇ ಕಾರಣಕ್ಕಾಗಿ, ಬಲವಂತದಿಂದ ಅಥವಾ ಪುಸಲಾಯಿಸಿ, ಎಲ್ಲಿಗಾದರೂ ಕರೆದುಕೊಂಡು ಹೋಗುವುದು ಒಂದು ಕ್ರಿಮಿನಲ್ ಅಪರಾಧ.
- ಒಬ್ಬ ಹುಡುಗಿಯನ್ನು ಆಕೆಯೊಂದಿಗೆ ಅನೈತಿಕ ಲೈಂಗಿಕ ಸಂಬಂಧ ಹೊಂದಲು ಒತ್ತಾಯಿಸುವ, ಬಲಾತ್ಕಾರಿಸುವುದು ಒಂದು ಕ್ರಿಮಿನಲ್ ಅಪರಾಧ. ಇದಕ್ಕೆ 10 ವರ್ಷಗಳವರೆಗಿನ ಕಾರಾರವಾಸ ಮತ್ತು ದಂಡದ ಶಿಕ್ಷೆಯಾಗುತ್ತದೆ.
- ಮದುವೆ ಮಾಡಿಕೊಳ್ಳುವ ಉದ್ದೇಶದಿಂದ ಒಬ್ಬ ಹುಡುಗಿಯನ್ನು ಬಲವಂತದಿಂದ ಕರೆದುಕೊಂಡು ಹೋಗುವುದು, ಅಥವಾ ಅಪಹರಿಸುವುದು ಒಂದು ಅಪರಾಧ. ಇದಕ್ಕೂ ಸಹ 10 ವರ್ಷಗಳವರೆಗಿನ ಕಾರಾವಾಸ ಮತ್ತು ದಂಡದ ಶಿಕ್ಷೆಯಾಗುತ್ತದೆ.
- ಒಬ್ಬ ವ್ಯಕ್ತಿಯನ್ನು ಬಲವಂತದಿಂದ ನಿಮ್ಮ ನಿಯಂತ್ರಣದಲ್ಲಿಟ್ಟುಕೊಂಡರೆ 3 ವರ್ಷಗಳವರೆಗಿನ ಕಾರಾವಾಸ ಮತ್ತು ದಂಡದ ಶಿಕ್ಷೆಯಾಗುತ್ತದೆ. ಎಂದು ಹೇಳಿದರು.

ಪೊಲೀಸ್ ಇನ್ಸ್‌ಪೆಕ್ಟರ್: ನೀವು ಹೇಳುವುದನ್ನು ಕೇಳಿದರೆ ಜಾವೇದನು ಈ ಎಲ್ಲ ಅಪರಾಧಗಳನ್ನು ಮಾಡಿರುವುದು ಕಂಡುಬರುತ್ತದೆ. ಇದನ್ನು ನಾನು ಖಂಡಿತ ತನಿಖೆ ಮಾಡುತ್ತೇನೆ. ಜಾವೇದನ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ಹೂಡಲಾಗುವುದು. ಅವನ ಅಪರಾಧಗಳಿಗೆ ಶಿಕ್ಷೆಯಾಗುತ್ತದೆ ಮತ್ತು ಫರೀದಾಳನ್ನು ಮುಕ್ತಗೊಳಿಸಲಾಗುವುದು.

## ಈ ಮಾಲಿಕೆಯಲ್ಲಿ

1 ದುಡಿಯುವ ಮಹಿಳೆಯರಿಗೆ ಕಾನೂನುಗಳು
ಪರಿಹಾರ ಪಡೆಯುವ ಹಕ್ಕು ಮತ್ತು
ಬಾಲಕಾರ್ಮಿಕರು

2 ಕರಾರು ಕಾರ್ಮಿಕ
ಅಂತರರಾಜ್ಯ ವಲಸೆ ಕೆಲಸಗಾರರು

3 ಜೀತ ಕಾರ್ಮಿಕ
ನಾಗರೀಕ ಹಕ್ಕುಗಳ ರಕ್ಷಣೆ

4 ಹಿಂದು ದತ್ತಕ ಮತ್ತು ಜೀವನಾಂಶ ಅಧಿನಿಯಮ,1956
ವೈದ್ಯಕೀಯ ಗರ್ಭಸಮಾಪನೆ

5 ಹಿಂದು ವಿವಾಹ ಕಾನೂನು
ಆಸ್ತಿಯ ಹಕ್ಕು

6 ಮುಸ್ಲಿಂ ವಿವಾಹ ಕಾನೂನು
ಆಸ್ತಿಯ ಹಕ್ಕು

7 ಕ್ರೈಸ್ತ ವಿವಾಹ ಕಾನೂನು
ಆಸ್ತಿಯ ಹಕ್ಕು

8 ವರದಕ್ಷಿಣೆ

9 ಅತ್ಯಾಚಾರ
ಬಲಾತ್ಕಾರದ ಅಪಹರಣ

10 ಪೊಲೀಸರು ಮತ್ತು ನೀವು

‘ನಮ್ಮ ಕಾನೂನುಗಳು’ ಮಹಿಳೆಯರಿಗೆ ಸಾಮಾನ್ಯವಾಗಿ ಅನ್ವಯಿಸುವ ಕಾನೂನುಗಳ ಬಗ್ಗೆ ಸರಳರೀತಿಯಲ್ಲಿ ತಿಳುವಳಿಕೆ-ನೀಡುವ ಹತ್ತು ಪುಸ್ತಿಕೆಗಳ ಒಂದು ಮಾಲಿಕೆಯಾಗಿದೆ. ಈ ಮಾಲಿಕೆಯಲ್ಲಿ, ಕೆಳವರ್ಗದ ಹೆಂಗಸರು, ಅದರಲ್ಲೂ ನವ ಸಾಕ್ಷರ ಮಹಿಳೆಯರು, ಬಳಸಲಿಕ್ಕೆ ಸಾಧ್ಯವಾಗಲಿ ಎನ್ನುವ ಉದ್ದೇಶದಿಂದ ನಿರೂಪಣೆಯನ್ನು ಸಾಧ್ಯವಾದಷ್ಟೂ ಸರಳವಾಗಿ, ಸಂಕ್ಷಿಪ್ತವಾಗಿ, ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ, ಉಪಮೆಗಳನ್ನ, ಉದಾಹರಣೆಗಳನ್ನ ನೀಡಿ ರಚಿಸಲಾಗಿದೆ. ಯಾರಿಗೆ ಈ ಕಾನೂನುಗಳು ತೀರ ಅವಶ್ಯಕವಿದೆಯೋ ಅಂತಹವರನ್ನ ಈ ಪುಸ್ತಿಕೆಗಳು ತಲುಪಬೇಕೆಂದು ನಮ್ಮ ಆಶಯ. ಈ ಹತ್ತು ಪುಸ್ತಕಗಳು ಕಾನೂನಿನ ಸಮಗ್ರ ಪಾಠವೇನಲ್ಲ. ಒಟ್ಟಾರೆಯಾಗಿ ಮಹಿಳೆಯರಿಗೆ ತಮ್ಮ ನಾಗರೀಕ ಹಕ್ಕುಗಳ ಅರಿವಾಗಲಿ, ಅವರು ಆತ್ಮವಿಶ್ವಾಸದಿಂದ ಹಾಗೂ ಸಂದಿಗ್ಧರಹಿತ ರೀತಿಯಲ್ಲಿ ತಮ್ಮ ಸಮಸ್ಯೆಗಳಿಗೆ ತಾವೇ ಧ್ವನಿಕೊಡುವಂತಾಗಲಿ ಎಂದು ಈ ಮಾಲಿಕೆ ಬಯಸುತ್ತದೆ.

ಈ ಪುಸ್ತಿಕೆಗಳ ಹಿಂದಿ ಅನುವಾದದಲ್ಲಿ, ಈಗಾಗಲೇ ಅವುಗಳನ್ನ, ಗ್ರಾಮೀಣ ಮಹಿಳೆಯರ ಕಾರ್ಯಾಗಾರಗಳಲ್ಲಿ ಬಳಸಿ, ಇವುಗಳ ಪರಿಣಾಮವನ್ನ ಪರೀಕ್ಷಿಸಲಾಗಿದೆ. ಹಲವು ಸಾಮಾಜಿಕ ಕಾರ್ಯಕರ್ತರುಗಳೊಡನೆ, ಕಾನೂನು ತಜ್ಞರುಗಳೊಡನೆ, ನಡೆಸಿದ ಕಾರ್ಯಾಗಾರಗಳಲ್ಲಿ ಕೂಡ ಇವುಗಳ ಬಳಕೆ ಹಾಗೂ ಪರೀಕ್ಷೆ ಆಗಿದೆ. ಆಗ ಬಂದ ಅಭಿಪ್ರಾಯಗಳನ್ನ ಮನನ ಮಾಡಿ ಪುಸ್ತಿಕೆಗಳನ್ನ ತಿದ್ದಿ ಪ್ರಕಟಿಸಲಾಗಿದೆ.

ಈಗ ಕನ್ನಡದಲ್ಲಿ ‘ನಮ್ಮ ಕಾನೂನುಗಳು’ ನಿಮ್ಮ ಕೈಸೇರುತ್ತಿದೆ. ಮೇಲೆ ಹೇಳಿದ ಆಶಯಗಳನ್ನ ಗಮನದಲ್ಲಿಟ್ಟುಕೊಂಡು, ಇಲ್ಲಿ ಸಲ್ಲುವ ಉಪಮೆಗಳು, ಉದಾಹರಣೆಗಳನ್ನ, ಬಳಸಿಕೊಂಡು ಹೆಗ್ಗೋಡಿನ **ಕವಿಕಾವ್ಯ ಟ್ರಸ್ಟಿನವರು** ಕನ್ನಡ ಅವತರಣಿಕೆಯನ್ನ ಸಿದ್ದಗೊಳಿಸಿದ್ದಾರೆ. **ಯುನಿಸೆಫ್** ಸಂಸ್ಥೆಯ ಉದಾರ ನೆರವಿನಿಂದಾಗಿ ಇದರ ಪ್ರಕಟಣೆ ಸಾಧ್ಯವಾಗುತ್ತಿದೆ. ಈ ಪುಸ್ತಕಗಳ ಪ್ರಯೋಜನವನ್ನ, ನವಸಾಕ್ಷರ ಮಹಿಳೆಯರು, ದುಡಿಯುವ ಮಹಿಳೆಯರ ಸಂಘಟನೆಗಳು, ಅಂಗನವಾಡಿ ಕಾರ್ಯಕರ್ತೆಯರು, ಪಂಚಾಯತಿ ಹಾಗೂ ತಾಲ್ಲೂಕು ಮಟ್ಟದ ಅಧಿಕಾರಿಗಳು, ಆರೋಗ್ಯ ಕಾರ್ಯಕರ್ತರು, ಶಾಲಾ ಅಧ್ಯಾಪಕರುಗಳು, ಸಾಕ್ಷರತಾ ಕಾರ್ಯಕರ್ತರು, ಹಾಗೂ ‘ಡ್ವಾಕ್ರ’ ಗುಂಪುಗಳು, ಪಡೆಯಬೇಕೆಂಬ ಉದ್ದೇಶದಿಂದ ಕರ್ನಾಟಕ ರಾಜ್ಯಮಹಿಳಾ ಅಬಿವೃದ್ಧಿ ನಿಗಮ, ವ್ಯಾಪಕ ರೀತಿಯಲ್ಲಿ ಅವುಗಳನ್ನ ಜನತೆಗೆ ತಲುಪಿಸಲು ಏರ್ಪಾಡುಮಾಡಿದೆ.


**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ**

16ನೆಯ ಮಹಡಿ, ಬಹುಪಯೋಗಿ ಕಟ್ಟಡ, ಮಹಾತ್ಮಗಾಂಧಿ ರಸ್ತೆ

ಬೆಂಗಳೂರು : 560001, ಫೊ: 5587418, 5588250

**ಮೂಲ ಪ್ರಕಾಶಕರು**

**ಮಾರ್ಗ್**

113-ಎ, ಶಾಪುರ್ ಜಾಟ್, ಎಷಿಯಾಡ್ ಗ್ರಾಮದ ಸಮೀಪ

ನವದೆಹಲಿ-110016, ಫೊ : 6467463.